# ಪಂಚಾಯಿತಿ ವ್ಯವಸ್ಥೆ ಹಾಗೂ ಮಹಿಳಾ ರಾಜಕೀಯ ಸಬಲೀಕರಣ

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)


ಸಂಶೋಧಕರು

**ಜಯಶ್ರೀ. ಟಿ.ಹೆಚ್.ಎಂ.**

ಮಾರ್ಗದರ್ಶಕರು

**ಡಾ. ಶೈಲಜ. ಇಂ. ಹಿರೇಮಠ**

ಪ್ರವಾಚಕರು ಮತ್ತು ಮುಖ್ಯಸ್ಥರು

ಮಹಿಳಾ ಅಧ್ಯಯನ ವಿಭಾಗ





ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩ ೨೭೬

೨೦೦೭

279

# ಪಂಚಾಯಿತಿ ವ್ಯವಸ್ಥೆ ಹಾಗೂ ಮಹಿಳಾ ರಾಜಕೀಯ ಸಬಲೀಕರಣ

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)


ಸಂಶೋಧಕರು

**ಜಯಶ್ರೀ. ಟಿ.ಹೆಚ್.ಎಂ.**

ಮಾರ್ಗದರ್ಶಕರು

**ಡಾ. ಶೈಲಜ. ಇಂ. ಹಿರೇಮಠ**

ಪ್ರವಾಚಕರು ಮತ್ತು ಮುಖ್ಯಸ್ಥರು

ಮಹಿಳಾ ಅಧ್ಯಯನ ವಿಭಾಗ







ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩ ೨೭೬

೨೦೦೭

# ಪ್ರಮಾಣಪತ್ರ

**ಪಂಚಾಯಿತಿ ವ್ಯವಸ್ಥೆ ಹಾಗೂ ಮಹಿಳಾ ರಾಜಕೀಯ ಸಬಲೀಕರಣ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಶೈಲಜ.ಇಂ.ಹಿರೇಮಠ, ಪ್ರವಾಚಕರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ, ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: ೩೦/೦೭/೨೦೦೭

(ಜಯಶ್ರೀ.ಟಿ.ಹೆಚ್.ಎಂ.)
ಸಂಶೋಧನ ವಿದ್ಯಾರ್ಥಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩ ೨೭೬

# ದೃಢೀಕರಣ ಪತ್ರ

ಜಯಶ್ರೀ. ಟಿ.ಹೆಚ್.ಎಂ. ಅವರು **ಪಂಚಾಯಿತಿ ವ್ಯವಸ್ಥೆ ಹಾಗೂ ಮಹಿಳಾ ರಾಜಕೀಯ ಸಬಲೀಕರಣ** ಎಂಬ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಸಂಶೋಧನೆಯ ಮೂಲಕ ರೂಪುಗೊಂಡಿದೆ. ಈ ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ, ಉದ್ದೇಶಗಳಿಗಾಗಲಿ ಇವರು ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ:

(ಡಾ. ಶೈಲಜ. ಇಂ. ಹಿರೇಮಠ)
ಪ್ರವಾಚಕರು ಮತ್ತು ಮಾರ್ಗದರ್ಶಕರು,
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

| ಅಧ್ಯಾಯ | | | ಪುಟ ಸಂಖ್ಯೆ |
|---|---|---|---|
| | | ಪ್ರಸ್ತಾವನೆ | |
| ಒಂದು | : | ಅಧ್ಯಯನ ಸ್ವರೂಪ, ಉದ್ದೇಶ, ವ್ಯಾಪ್ತಿ ಹಾಗೂ ವೈಧಾನಿಕತೆ. | ೦೧ – ೧೭ |
| ಎರಡು | : | ಮಹಿಳಾ ಸಬಲೀಕರಣದ ಆಯಾಮಗಳು | ೧೮ – ೨೫ |
| ಮೂರು | : | ಮಹಿಳಾ ಚಳುವಳಿಗಳು ಹಾಗೂ ರಾಜಕೀಯ ಪ್ರಕ್ರಿಯೆಯಲ್ಲಿ ಮಹಿಳೆ | ೨೬ – ೩೭ |
| ನಾಲ್ಕು | : | ಸ್ಥಳೀಯ ಸರ್ಕಾರ ಹಾಗೂ ಅಧಿಕಾರ ವಿಕೇಂದ್ರಿಕರಣ | ೩೮ – ೪೭ |
| ಐದು | : | ಪಂಚಾಯಿತಿ ವ್ಯವಸ್ಥೆಯಲ್ಲಿ ಮಹಿಳೆ | ೪೮ – ೬೨ |
| ಆರು | : | ಮಹಿಳಾ ಮೀಸಲಾತಿ : ವಾಸ್ತವಿಕತೆ : ಪ್ರಕರಣಗಳ ಪರಿಶೀಲನೆ | ೬೩ – ೭೯ |
| ಏಳು | : | ಸಾರಾಂಶ ಹಾಗೂ ಸಲಹೆಗಳು | ೮೦ – ೯೩ |

ಪ್ರಸ್ತಾವನೆ

ಭಾರತ ಒಂದು ಜಾತ್ಯತೀತ, ಪ್ರಜಾಪ್ರಭುತ್ವ ರಾಷ್ಟ್ರ. ಪ್ರಜಾಪ್ರಭುತ್ವದ ತಳಹದಿಯಾಗಿರುವ ಸ್ವಾತಂತ್ರ್ಯ, ಸಮಾನತೆ, ಹಾಗೂ ಹಕ್ಕು-ಕರ್ತವ್ಯಗಳು ಸಂವಿಧಾನದಡಿಯಲ್ಲಿ ರಚಿತವಾದವುಗಳು. ಪ್ರತಿಯೊಬ್ಬ ಭಾರತೀಯ ಪ್ರಜೆ ಸ್ವಾತಂತ್ರ್ಯ, ಸಮಾನತೆ, ಹಕ್ಕುಗಳನ್ನು ಪಡೆಯುವಂತಹ ನ್ಯಾಯ ಒದಗಿಸುವ ಗುರಿಯನ್ನೇ ಮೂಲ ಉದ್ದೇಶವಾಗಿಟ್ಟುಕೊಂಡು ರಚಿತವಾಗಿ ಶ್ರೇಣಿಕರಣಗೊಂಡ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮ ಮುಂದಿರುವ ಸಮಾನ ಅವಕಾಶಗಳನ್ನು ಪಡೆಯಲಾರದ ಸ್ಥಿತಿ ಶೋಷಿತ ಸಮುದಾಯದ್ದಾಗಿದೆ. ಶೋಷಕ ಹಾಗೂ ಶೋಷಿತ ಸಮುದಾಯಗಳ ನಡುವಿನ ಅಂತರವನ್ನು ಹೋಗಲಾಡಿಸಲು, ಶೋಷಿತ ಜನಾಂಗಕ್ಕೆ ಸಮಾಜದ ವಿವಿಧ ರಂಗಗಳಲ್ಲಿ ಭಾಗವಹಿಸುವ ಮುಕ್ತ ಅವಕಾಶವನ್ನು ನೀಡುವ ಹಾಗೂ ರಾಜಕೀಯ ಆಡಳಿತ ರಂಗದಲ್ಲಿ ನಿರ್ಣಯರೂಪಕರಾಗಿ ಭಾಗವಹಿಸುವ ಅಧಿಕಾರ-ಅವಕಾಶಗಳನ್ನು ಮಹಿಳೆಯರಿಗಾಗಿ ನೀಡಬೇಕೆಂದು ಸಂವಿಧಾನವು ನಿರ್ದೇಶನಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಗೆ ನೀಡಿತು.

ಮಹಿಳೆ ಎನ್ನುವುದು ಪದ-ಪರಿಭಾಷೆಯಾಗಿರದೆ ಪರಿಕಲ್ಪನೆಯಾಗಿ ಬಳಕೆಗೊಳ್ಳುತ್ತದೆ. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಹಲವಾರು ಸಂಸ್ಥೆಗಳು ರೂಪುಗೊಂಡಿವೆ. ಅವುಗಳಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸಂಸ್ಥೆಗಳು ಪ್ರಮುಖವಾದವುಗಳು. ನನ್ನ ಅಧ್ಯಯನ ಮಹಿಳೆಯ ರಾಜಕೀಯ ಸಬಲೀಕರಣದ ಮೂಲಕ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿ ಸಾಧ್ಯತೆ ಬಗ್ಗೆ ಬೆಳಕು ತೋರುವುದಾಗಿದೆ. ಯಾವುದೇ ಸಂಸ್ಥೆಯ ಅಭಿವೃದ್ಧಿ ಆ ರಾಷ್ಟ್ರದ ಸ್ತ್ರೀ-ಪುರುಷರ, ಮಕ್ಕಳ ಹಾಗೂ ವೃದ್ಧರ ಅಭಿವೃದ್ಧಿ ಕಾರ್ಯಗಳಿಗೆ ಸಂಬಂಧಿಸಿರುತ್ತದೆ. ರಾಜಕೀಯ ಸಂಸ್ಥೆ ಪ್ರಭಾವಶಾಲಿಯಾದ ಶಾಸಕಾಂಗ, ಕಾರ್ಯಾಂಗ ಹಾಗು ನ್ಯಾಯಾಂಗಗಳೆಂಬ ಅಂಶಗಳನ್ನು ಹೊಂದಿದ್ದು, ಪ್ರತಿಯೊಂದು ಅಂಗ ರಾಷ್ಟ್ರ-ರಾಜ್ಯ ಯೋಜನೆಗಳನ್ನು ರೂಪಿಸುವ, ಕಾರ್ಯರೂಪಕ್ಕೆ ತರುವ ಹಾಗೂ ನ್ಯಾಯಪೂರಿತವಾಗಿ ರಕ್ಷಿಸುವ ಕಾರ್ಯ ಮಾಡುತ್ತದೆ.

ಎಲ್ಲಿ ಸ್ತ್ರೀ-ಪುರುಷರು ತಮ್ಮ ಹಕ್ಕು-ಬಾಧ್ಯತೆಗಳನ್ನು ಸ್ವತಂತ್ರವಾಗಿ ಅನುಭವಿಸುತ್ತಾರೋ, ಅಲ್ಲಿ ರಾಷ್ಟ್ರದ ಅಭಿವೃದ್ಧಿ ಸಾಧ್ಯವಾಗುತ್ತದೆ. ಈ ರೀತಿಯ ಹಕ್ಕು-ಸ್ವಾತಂತ್ರ್ಯವನ್ನು ಸಂವಿಧಾನದ ಮೂಲಕವಾಗಿ ರಾಷ್ಟ್ರದ ಪ್ರಜೆಗಳು ಪಡೆಯುತ್ತಾರಾದರೂ, ಈ ಹಕ್ಕುಗಳನ್ನು ರೂಪಿಸಿ, ಕಾರ್ಯರೂಪಕ್ಕೆ

ತರುವ ಕಾರ್ಯವನ್ನು ರಾಷ್ಟ್ರದ ಸರ್ಕಾರ ಮಾಡುತ್ತದೆ. ಮೂಲಭೂತ ಹಕ್ಕುಗಳು ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವ ಸಾಧನಗಳು. ಮೂಲಭೂತ ಹಕ್ಕುಗಳು ಸ್ತ್ರೀ-ಪುರುಷರಿಗೆ ಸಮನಾಗಿದ್ದರೂ ಸರ್ಕಾರ ಕಾರ್ಯಕ್ರಮ ರೂಪಿಸುವಲ್ಲಿ ಹೆಚ್ಚಿನ ಅಧಿಕಾರ ಸ್ವಾತಂತ್ರ್ಯವನ್ನು ಪುರುಷ ಕೇಂದ್ರಿತ ವ್ಯವಸ್ಥೆಗೆ ನೀಡಿದೆ. ಪಿತೃ ಪ್ರಧಾನ ಕೇಂದ್ರಿತ ಸಾಮಾಜಿಕ ವ್ಯವಸ್ಥೆ ಅಸಮತೋಲನ ಅಧಿಕಾರ ಹಂಚಿಕೆ ರೂಪಿಸಿದೆ, ಹಾಗೂ ಕೌಟುಂಬಿಕ ನೆಲೆಯಿಂದ ಮಹಿಳೆಯನ್ನು ಬಂಧಿಸಿ, ಅವಳ ಅಂತರ್ಗತ ಸಾಮರ್ಥ್ಯ, ಬೌದ್ಧಿಕತೆ, ಚಿಂತನೆಯನ್ನು ಹತ್ತಿಕ್ಕಿ, ಅವಳ ದೇಹದ ಮೇಲೆ ನಿಯಂತ್ರಣ ಸಾಧಿಸಿದೆ.

ಸಬಲೀಕರಣ ಎಂಬ ಪದವನ್ನು ಆಂಗ್ಲಪದವಾದ 'Empowerment'ಗೆ ಸಮನಾರ್ಥವಾಗಿ ಬಳಸಲಾಗುತ್ತದೆ. ಶಕ್ತಿ, ಅಧಿಕಾರ ನೀಡುವ, ಸಮರ್ಥತೆಯನ್ನು ಅರ್ಹತೆಯನ್ನು ಸೂಚಿಸುವುದಾಗಿದೆ. ಮಹಿಳಾ ಸಬಲೀಕರಣ ಮಹಿಳೆಯು ಹೊಂದಿರುವ ಶಕ್ತಿ, ಅಧಿಕಾರವನ್ನು ಸೂಚಿಸುತ್ತದೆ. ಈ ಶಕ್ತಿಯು ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಶಕ್ತಿಯಾಗಿದೆ. ಮಹಿಳೆ ತನ್ನ ಆಯ್ಕೆಯ ಹಕ್ಕನ್ನು ಹೊಂದಿರುವ, ತನ್ನ ಜೀವನದ ನಿರ್ಣಾಯಕ ಅಂಶಗಳನ್ನು ರೂಪಿಸುವ ಹಾಗು ಸಂಪನ್ಮೂಲಗಳ ಮೇಲೆ ಹಿಡಿತ ಸಾಧಿಸುವ ಪ್ರಕ್ರಿಯೆ ಮಹಿಳಾ ಸಬಲೀಕರಣ. ಪಿತೃ ಪ್ರಧಾನ ಸಮಾಜಿಕ ವ್ಯವಸ್ಥೆ ಮಹಿಳೆಯನ್ನು ಆರ್ಥಿಕವಾಗಿ ದುರ್ಬಲರನ್ನಾಗಿಸುವುದರ ಮೂಲಕ ಅವಳ ದೇಹ, ಚಿಂತನೆ ಮೇಲೆ ನಿಯಂತ್ರಣ ಸಾಧಿಸುತ್ತ, ಹಕ್ಕು-ಅಧಿಕಾರಗಳನ್ನು ಕಸಿದುಕೊಳ್ಳುತ್ತ, ಅವಳನ್ನು ಕೀಳಾಗಿಸುತ್ತ ಸಮಾಜದಲ್ಲಿ ದ್ವಿತೀಯ ಸ್ಥಾನಕ್ಕೆ ದೂಡಿದೆ. ಶಿಕ್ಷಣ ಸೌಲಭ್ಯ ನಿರಾಕರಿಸುವುದರ ಮೂಲಕ ಅವಳ ಬೌದ್ಧಿಕ ಬೆಳವಣಿಗೆಗೆ ಹಾಗೂ ಅವಳಲ್ಲಿಯ ಪ್ರತಿಭೆಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಮುಕ್ತ ಅವಕಾಶ ಕೊಡದೇ ಅವಳನ್ನು ಸಮಾಜ ವ್ಯವಸ್ಥೆಯ ಅಂಚಿಗೆ ತಳ್ಳಿದರು. ನಂತರದಲ್ಲಿ ಉನ್ನತ ವರ್ಗದ ಮಹಿಳೆಯರಿಗೆ ಶಿಕ್ಷಣ ಅವಕಾಶ ಕಲ್ಪಿಸಲಾಯಿತಾದರೂ, ಮನೆಯಲ್ಲಿಯೇ ಶಿಕ್ಷಣ ಕಲಿಯಬೇಕಿತ್ತು. ಹೀಗೆ ಮನೆಯಲ್ಲಿ ಕಲಿತ ಶಿಕ್ಷಣದ ಮುಖ್ಯ ಉದ್ದೇಶ ಮನೆಯ ಉಸ್ತುವಾರಿಯನ್ನು ಸರಿಯಾಗಿ ನೋಡುವ, ಮನೆಯಲ್ಲಿನ ಮಕ್ಕಳಿಗೆ ಬೋಧನೆ ಮಾಡುವದಕಷ್ಟೆ ಸೀಮಿತವಾಗಿತ್ತು. ಶಿಕ್ಷಣ ಮಹಿಳೆಗೆ ಅತ್ಯವಶ್ಯಕ ಎಂದು ಮಹಿಳಾ ಪರ ಆಲೋಚನೆಗಳು ಪ್ರಾರಂಭವಾದವು. ಶಿಕ್ಷಣ ಪಡೆದ ಮಹಿಳೆಯರು ಸಾರ್ವಜನಿಕ ಸಮಸ್ಯೆಗಳನ್ನು ಅರ್ಥ ಮಾಡಿಕೊಂಡು, ಸಮಸ್ಯೆಗಳಿಗೆ ಸ್ಪಂದಿಸತೊಡಗಿದರು. ಹೀಗೆ ಸಾಮಾಜಿಕ ಚಳುವಳಿ ಪರಿಕಲ್ಪನೆ ಮೂಡತೊಡಗಿತು. ಸಾಮಾಜಿಕ ಚಳುವಳಿ ಮಹಿಳಾ ಚಳುವಳಿಯ ಉದಯಕ್ಕೆ ಕಾರಣವಾಯಿತು.

ರಾಷ್ಟ್ರೀಯ ಹೋರಾಟದಲ್ಲಿ ಗಾಂಧೀಜಿಯವರ ಕರೆಯ ಮೇರೆಗೆ ಭಾಗವಹಿಸಿದ ಸಾವಿರಾರು ಮಹಿಳೆಯರು ವಿದೇಶಿಯರ ವಿಚಾರಗಳನ್ನು, ಆಳ್ವಿಕೆಯನ್ನು ಅಹಿಂಸಾತ್ಮಕ ನೆಲೆಯಿಂದ ಎದುರಿಸುವ ಆತ್ಮಸ್ಥೈರ್ಯವನ್ನು ಹೊಂದಿದ್ದರು. ವಿದೇಶಿ ನೀತಿಯಿಂದಾಗಿ ಭಾರತೀಯ ಪರಂಪರಾಗತ ವೃತ್ತಿಯಾದ

ನೂಲುವುದು, ನೇಯುವುದು, ಬಟ್ಟೆ ವ್ಯಾಪಾರ, ಗಿರಣಿಗಳು ಕೆಲಸ ಕಳೆದುಕೊಂಡಿದ್ದರಿಂದ ಬ್ರಿಟೀಷರ ವಿರುದ್ಧ ಹೋರಾಡಲು ರಾಷ್ಟ್ರೀಯತೆಯೊಂದಿಗೆ ತಮ್ಮನ್ನು ಮಹಿಳೆಯರು ಗುರುತಿಸಿಕೊಂಡರು. ಸ್ವಾತಂತ್ರ್ಯ ಚಳುವಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದ ಮಹಿಳೆಯರು ಬ್ರಿಟೀಷರ ವಿರುದ್ಧ ಭಿತ್ತಿಪತ್ರ ಹಂಚುವ ಯುದ್ಧಕಲೆ ರೂಪಿಸುವ, ಹೋರಾಟಗಾರರಿಗೆ ಸ್ಫೂರ್ತಿ ನೀಡುವ, ಕಾರ್ಯದಲ್ಲಿ ನಿರತರಾದರು. ರಾಷ್ಟ್ರ ಪ್ರೇಮವನ್ನು ಸಾರುವ ಗೀತೆಯನ್ನು ರಚಿಸಿ ಹಾಡುವ, ಲೇಖನ, ಕಾವ್ಯ ಮೂಲಕ ಭಾರತೀಯರನ್ನು ಹುರಿದುಂಬಿಸುತ್ತಿದ್ದರು. ಹೀಗೆ ಸಾವಿರಾರು ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಗಳಾದರೂ ಬೆರಳೆಣಿಕೆಯಷ್ಟು ಮಹಿಳೆಯರು ಗುರುತಿಸಲ್ಪಟ್ಟರು. ಸರಳಾ ದೇವಿ ಚೌಧುರಾಣಿ, ಕಮಲಾದೇವಿ ಚಟ್ಟೋಪಾಧ್ಯಾಯ ಹಾಗೂ ಡಾ.ಮುತ್ತುಲಕ್ಷ್ಮಿರೆಡ್ಡಿಯವರು ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿದ್ದರು.

ಹಿಂದ್ ಸ್ವರಾಜ್ ಪತ್ರಿಕೆಯನ್ನು ಮನೆ ಮನೆಗೆ ಹೋಗಿ ಹಂಚುತ್ತಿದ್ದರು. ಗರಡಿ ಮನೆಗಳನ್ನು ಸ್ಥಾಪಿಸಿ, ಭಾರತೀಯ ಯುವಕರಿಗೆ ತರಬೇತಿಯನ್ನು ನೀಡಲಾಗುತ್ತಿತ್ತು. ಮಹಿಳೆಯರ, ರಾಜಕೀಯ ಸ್ವ ಇಚ್ಛಾ ಶಕ್ತಿ, ಧೈರ್ಯ, ಸಾಹಸ, ಸಂಘಟನಾ ಶಕ್ತಿ ಹಾಗೂ ವಿಚಾರಪೂರ್ಣ ಚಿಂತನೆಗಳನ್ನು ಎತ್ತಿ ಹಿಡಿದಿದ್ದ ರಾಷ್ಟ್ರೀಯ ನಾಯಕರು ಸ್ವಾತಂತ್ರ್ಯದ ನಂತರದಲ್ಲಿ ಮಹಿಳೆಯರನ್ನು ನಿರ್ಲಕ್ಷಿಸತೊಡಗಿದರು. ಸರಳಾದೇವಿ ಚೌದುರಾಣಿ, ಹೇಮಾವತಿ ಸೇನ, ರಮಾಬಾಯಿ ರಾನಡೆ ಮುಂತಾದವರು ಬಾಲಕಿಯರಿಗಾಗಿ ಶಾಲೆಗಳನ್ನು ತೆರೆದರು. ೬೨೬ ಬಾಲಕಿಯರ ಶಾಲೆಗಳಲ್ಲಿ ೨೧,೭೫೫ ಬಾಲಕಿಯರು ಪ್ರವೇಶ ಪಡೆದಿದ್ದರು (ಫರ್ಜಾನ್ ಪಠಾಣ ಹಕ್ಕುಗಳಿಗಾಗಿ ಮಹಿಳೆಯರ ಹೋರಾಟ, ಸಂಯುಕ್ತ ಕರ್ನಾಟಕ ೧೭/೦೨/೨೦೦೨), ೧೯೧೭ ರಿಂದ ೧೯೨೭ ರ ಅವಧಿಯಲ್ಲಿ ೪ ಮಹಿಳಾ ಸಂಸ್ಥೆಗಳು ರಚಿತವಾದವು. 'ರಾಷ್ಟ್ರೀಯ' ಮಹಿಳಾ ಸಮಿತಿ, ಅಖಿಲಭಾರತ ಮಹಿಳಾ ಸಮಾವೇಶ, ಭಾರತೀಯ ಮಹಿಳಾ ಸಂಸ್ಥೆಗಳು ಆರಂಭವಾದವು. ಮಹಿಳೆಯರ ಹಕ್ಕುಗಳನ್ನು ಪ್ರತಿಪಾದಿಸಲು ಈ ಸಂಸ್ಥೆಗಳು ಉತ್ತಮ ವೇದಿಕೆಯಾದವು. ಆರ್ಥಿಕ ಮತ್ತು ರಾಜಕೀಯ ಅಭಿವೃದ್ಧಿಯ ಮೂಲಕ ಸಾಮಾಜಿಕ-ಸಾಂಸ್ಕೃತಿಕ ಅಭಿವೃದ್ಧಿ ಸಾಧಿಸಬೇಕೆನ್ನುವುದು ಮಹಿಳಾ ಹೋರಾಟದ ಮುಖ್ಯ ಉದ್ದೇಶವಾಯಿತು. ಬ್ರಿಟೀಷ್ ಸರ್ಕಾರದ ಸಮಯದಲ್ಲಿ ನಡೆದ ಸ್ಥಳೀಯ ಚುನಾವಣೆಯಲ್ಲಿ ಮಹಿಳಾ ಭಾಗವಹಿಸುವಿಕೆ ಮತದಾರಳಾಗಿಯೋ ಅಥವಾ ಅಭ್ಯರ್ಥಿಯಾಗಿಯೋ ಎಂಬ ವಿಷಯ ಚರ್ಚಿತವಾಯಿತು. ೧೯೧೮ ರಲ್ಲಿ ದಿಲ್ಲಿಯಲ್ಲಿ ನಡೆವ 'ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ' ಮೂರನೇಯ ಸಮ್ಮೇಳನದಲ್ಲಿ ಮಹಿಳೆಯರಿಗೆ ಮತ ಚಲಾಯಿಸುವ ಹಕ್ಕನ್ನು ನೀಡಬೇಕೆಂದು ಸರಳಾದೇವಿ ಚೌದುರಾಣಿ ಬಲವಾಗಿ ಪ್ರತಿಪಾದಿಸಿದರು. ಬ್ರಿಟೀಷ್ ಸರ್ಕಾರದ ಪರವಾಗಿ ಭಾರತಕ್ಕೆ ಬಂದಿದ್ದ 'ಸರ್ ಮಾಂಟೆಗ್ಯೂ ಜೇಮ್ಸ್‌ಫರ್ಡ್' ಭಾರತೀಯ ಮಹಿಳೆಯರ ಮೂಲಭೂತ ಹಕ್ಕಿನ ಬಗ್ಗೆ

ನಿರ್ಣಯ ತೆಗೆದುಕೊಳ್ಳುವಲ್ಲಿ ಉತ್ಸುಕನಾಗಿದ್ದರೂ ಭಾರತೀಯರ ಮನಗೆಲ್ಲಲು ಭಾರತೀಯ ಶಾಸನಸಭೆಗೆ ನಿರ್ಧಾರ ತೆಗೆದುಕೊಳ್ಳುವಂತೆ ತಿಳಿಸಿದರು.

ಇಂಗ್ಲೆಂಡನಲ್ಲಿ ನಡೆದ ದುಂಡುಮೇಜಿನ ಪರಿಷತ್ತಿನ ಸಭೆಗೆ ಸರೋಜಿನಿ ನಾಯ್ಡು, ಡಾ. ಮುತ್ತುಲಕ್ಷ್ಮಿ ರೆಡ್ಡಿ ಹಾಗೂ ರಾಮೇಶ್ವರಿ ನೆಹರುರವರು ಭಾರತೀಯ ಮಹಿಳೆಯರ ಪ್ರತಿನಿಧಿಯಾಗಿ ಹೋದಾಗ, ಅಲ್ಲಿ ನಡೆಯುತ್ತಿದ್ದ ಮಹಿಳೆಯರ ಮತದಾನದ ಹಕ್ಕಿನ ಚಳುವಳಿಯು ಅವರ ಮೇಲೆ ಗಾಢವಾದ ಪರಿಣಾಮ ಬೀರಿತ್ತು. ಹೀಗಾಗಿ ಮಹಿಳೆಯರ ಮತದಾನದ ಹಕ್ಕಿನ ಬಗ್ಗೆ ಭಾರತೀಯ ಮಹಿಳೆಯರು ಪ್ರಭಲವಾಗಿ ಪ್ರತಿಪಾದಿಸಿದ್ದರು. ಪ್ರಾಂತೀಯ ಶಾಸನ ಸಭೆ ಭಾರತೀಯ ಮಹಿಳೆಯರ ಮತದಾನದ ಹಕ್ಕಿಗೆ ನಿರ್ಬಂಧ ಹಾಕಿತು. 'ವಿವಾಹಿತ ಭಾರತೀಯ ಸ್ತ್ರೀಗೆ ಮಾತ್ರ ಮತ ಚಲಾಯಿಸುವ ಹಕ್ಕಿರಬೇಕು' ಪ್ರಾಂತೀಯ ಶಾಸನಸಭೆಯ ಈ ಅಂಶವನ್ನು ಭಾರತೀಯ ಮಹಿಳೆಯರು ವಿವಾಹಕ್ಕೂ, ಮಹಿಳೆಯ ಮತದಾನಕ್ಕೂ ಯಾವುದೇ ರೀತಿಯ ಸಂಬಂಧವಿಲ್ಲವೆಂದು ವಿರೋಧಿಸುತ್ತ, 'ಅಪ್ರಾಪ್ತ ವಯಸ್ಸಿನ ಹುಡುಗಿ ವಿವಾಹವಾದರೂ ಅವಳ ಚಿಂತನಾ ಶಕ್ತಿ ಪಕ್ವವಾಗಿರುವುದಿಲ್ಲ ಹಾಗೂ ವಯಸ್ಕ ಮಹಿಳೆ ವಿವಾಹವಾಗದಿದ್ದರೆ ಅವಳಿಗೆ ಮತದಾನದ ಹಕ್ಕನ್ನು ವಿರೋಧಿಸಲಾಗುವುದೇ? ಎಂದು ವಾದಿಸಿದರು.

ಬ್ರಿಟೀಷ್ ಸರ್ಕಾರ ೧೯೨೬ ರಲ್ಲಿ ಪ್ರಾಂತೀಯ ಶಾಸನ ಸಭೆಯ ಸದಸ್ಯತ್ವವನ್ನು ಮಹಿಳೆಯರಿಗೆ ನೀಡಬೇಕೆಂದು ಮಾಡಿದ ನಿಯಮದನ್ವಯ ಡಾ. ಮುತ್ತುಲಕ್ಷ್ಮೀ ರೆಡ್ಡಿಯವರು ಮದ್ರಾಸ್ ಶಾಸಕಾಂಗಕ್ಕೆ ಆಯ್ಕೆಯಾದರು. ಇದು ಮಹಿಳೆಯರಿಗೆ ದೊರಕಿದ ಪ್ರಥಮ ವಿಜಯವಾಗಿತ್ತು. ಇದರಿಂದ ಪ್ರೇರೇಪಿತರಾದ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಅಕ್ಷರಾಭ್ಯಾಸ ಮಾಡುವತ್ತ ಒಲವು ತೋರತೊಡಗಿದರು. ಮಹಿಳೆಯರ ಸುಧಾರಣೆಯನ್ನು ಸಹಿಸದ ಪುರುಷರು ಬಹಿರಂಗವಾಗಿ ಮಹಿಳೆಯರನ್ನು ಟೀಕಿಸತೊಡಗಿದರು. ಸಾಮಾಜಿಕ ವ್ಯವಸ್ಥೆಯ ಅಡಿಯಲ್ಲಿರುವ ಹಲವಾರು ಕ್ಷೇತ್ರಗಳಲ್ಲಿ ರಾಜಕೀಯ ಕ್ಷೇತ್ರ ಪ್ರಬಲವಾಗಿದ್ದು, ಮಹಿಳೆಯ ರಾಜಕೀಯ ಭಾಗವಹಿಸುವಿಕೆ ಮೂಲಕ ಮಹಿಳೆ ಸಮಾಜದ ಮುಖ್ಯವಾಹಿನಿಗೆ ಬಂದರೆ ತಮ್ಮ ಸ್ಥಾನ ಕಡಿಮೆಯಾಗುತ್ತದೆಂದು ಭಾವಿಸಿದ ಪುರುಷ ಕೇಂದ್ರಿತ ವ್ಯವಸ್ಥೆ ಮಹಿಳೆಯ ರಾಜಕೀಯ ಭಾಗವಹಿಸುವಿಕೆಯನ್ನು ಟೀಕಿಸತೊಡಗಿತು. ಆದರೆ ೧೯೩೭ ರ ಚುನಾವಣೆಯಲ್ಲಿ ಸಾವಿರಾರು ಮಹಿಳೆಯರು ಮತದಾರರಾಗಿ ಪಾಲ್ಗೊಂಡರು.

೧೯೪೬ ರಲ್ಲಿ ರಚಿತವಾದ ಭಾರತ ಸಂವಿಧಾನ ರಚನಾ ಸಮಿತಿಯಲ್ಲಿ ೧೪ ಜನ ಮಹಿಳೆಯರು ಭಾಗವಹಿಸಿದ್ದರು. ಹಾಗಿದ್ದರೂ ಸ್ವಾತಂತ್ರ್ಯ ನಂತರದ ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ಕೂಡ ರಾಜಕೀಯ ಪಕ್ಷಗಳು ಕೇವಲ ಪುರುಷ ಅಭ್ಯರ್ಥಿಗಳತ್ತ ಹೆಚ್ಚಿನ ಒಲವನ್ನು ತೋರಿದವು. ಸ್ವಾತಂತ್ರ್ಯದ

ಸಮಯದಲ್ಲಿನ ಮಹಿಳೆಯರ ಹೋರಾಟ, ಕಾರ್ಯದಕ್ಷತೆ ಸ್ವಾತಂತ್ರ್ಯ ನಂತರದಲ್ಲಿ ನೇಪಥ್ಯಕ್ಕೆ ಸರಿದವು. ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಕೇಂದ್ರ ಮತ್ತು ರಾಜ್ಯ ಆಡಳಿತ ಅಧಿಕಾರ ಕೇಂದ್ರಕ್ಕೆ ಅವಕಾಶ ಮಾಡಿಕೊಡುತ್ತದೆಂದು ಭಾವಿಸಿದ ಪುರುಷ ರಾಜಕಾರಣಿಗಳು, ಮಹಿಳೆಯರ ರಾಜಕೀಯ ಪ್ರವೇಶವನ್ನು ಕಡೆಗಣಿಸಲಾರಂಭಿಸಿದರು. ೧೯೭೫ ರ ವರ್ಷವನ್ನು '**ಅಂತಾರಾಷ್ಟ್ರೀಯ ಮಹಿಳಾ ವರ್ಷ**'ವಾಗಿ ವಿಶ್ವಸಂಸ್ಥೆ ಘೋಷಿಸುವ ಪೂರ್ವದಲ್ಲಿ, ಜಗತ್ತಿನ ಎಲ್ಲಾ ರಾಷ್ಟ್ರಗಳಿಗೆ ಆ ರಾಷ್ಟ್ರದ ಮಹಿಳೆಯರ ಸ್ಥಾನಮಾನ ಹಾಗೂ ರಾಜಕೀಯ ಹಕ್ಕುಗಳ ಬಗ್ಗೆ ವರದಿ ತಯಾರಿಸಿ ಕಳಿಸುವಂತೆ ಹೇಳಿತು. ಅದರನ್ವಯ ಭಾರತ ಸರ್ಕಾರ ಭಾರತೀಯ ಮಹಿಳೆಯರ ಸ್ಥಾನಮಾನ, ಅವಕಾಶಗಳ ಪ್ರಾತಿನಿಧ್ಯ, ಕಾನೂನು ಬೆಂಬಲ, ಶೈಕ್ಷಣಿಕ, ರಾಜಕೀಯ, ಆರ್ಥಿಕ ಅಭಿವೃದ್ಧಿಯಲ್ಲಿನ ಮಹಿಳಾ ಪಾಲುಗಾರಿಕೆ ಬಗ್ಗೆ ವಿವರವನ್ನು ಸಲ್ಲಿಸಿತ್ತು. ಅದನ್ನು 'ಸಮಾನತೆಯಡೆಗೆ' ಎಂದು ಹೆಸರಿಸಲಾಯಿತು.

'ಸಮಾನತೆಯಡೆಗೆ' ಎಂಬ ವರದಿ ಅನ್ವಯ ಮಹಿಳೆಯರ ಕ್ಷೇಮಾಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಕೈಗೊಳ್ಳಲಾಯಿತು. ಮಹಿಳೆಯರ ಶಿಕ್ಷಣ ಪ್ರಗತಿ, ಕುಟುಂಬ ಯೋಜನಾ ಕಾರ್ಯಕ್ರಮಗಳು, ಗ್ರಾಮೀಣ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳು, ಮಹಿಳೆಯರಿಗೆ ನ್ಯಾಯ ಒದಗಿಸುವಂತ ಕಾನೂನುಗಳನ್ನು ಪಂಚವಾರ್ಷಿಕ ಯೋಜನೆಗಳ ಮುಖಾಂತರ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಮಹಿಳೆಯರ ಸ್ಥಿತಿಗತಿ, ಅವರ ಸಾಮಾಜಿಕ ಹಿನ್ನಡೆಗೆ ಕಾರಣಗಳು, ಮಹಿಳೆಯರ ಅದರಲ್ಲಿಯೂ ಸಾಮಾಜಿಕ ವ್ಯವಸ್ಥೆಯ ಅಂಚಿನಲ್ಲಿರುವ ತಳಸಮುದಾಯದ ಮಹಿಳೆಯರ ಶೋಷಣೆ, ಕೀಳರಿಮೆಗೆ ಕಾರಣಗಳಾವುವು? ಎಂಬ ಬಗ್ಗೆ ಚರ್ಚೆಗಳಲ್ಲಿ ಸಮಾಜಶಾಸ್ತ್ರಜ್ಞರು, ಪತ್ರಿಕೋದ್ಯಮಿಗಳು, ಮಹಿಳಾ ಸಂಘಸಂಸ್ಥೆಗಳು ಹಾಗೂ ಸಮಾಜ ಸೇವಕರು ಪಾಲ್ಗೊಂಡು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಬಹುಪಾಲು ಆಹ್ವಾನಿತರು ಮಹಿಳೆಯರಿಗಾಗಿ ರೂಪಿಸಿದ, ಜಾರಿಗೆ ತಂದ ಅಭಿವೃದ್ಧಿ ಯೋಜನೆಗಳು ಮಹಿಳೆಯರನ್ನು ತಲುಪಲಾರದಕ್ಕೆ ಕಾರಣಗಳನ್ನು ಶೋಧಿಸುವಂತಹ ನಿರ್ಣಯಕ್ಕೆ ಬಂದರು. ಸರ್ಕಾರ ಕಾರ್ಯರೂಪಕ್ಕೆ ತಂದ ಅಭಿವೃದ್ಧಿ ಯೋಜನೆಗಳು ಮಹಿಳೆಯನ್ನು ತಲುಪಲಾರದಕ್ಕೆ ಕಾರಣ ಪುರುಷ ಕೇಂದ್ರಿತ ಸಾಮಾಜಿಕ ವ್ಯವಸ್ಥೆ ಎಂಬ ಒಮ್ಮತಕ್ಕೆ ಬಂದರು. ಸರ್ಕಾರದ ಯೋಜನಾ ಕಾರ್ಯಕ್ರಮಗಳು ಮಹಿಳೆಯರನ್ನು ತಲುಪುವ ಪೂರ್ವದಲ್ಲಿ ಕುಟುಂಬ ಕೇಂದ್ರಿತ ಯಜಮಾನನ ಪಾಲಾಗುವ ವಿಷಯ ಬೆಳಕಿಗೆ ಬಂದಿತು. ಮಹಿಳೆ ಆರ್ಥಿಕವಾಗಿ ಸಬಲಳಾದಾಗ ಮಾತ್ರ ಅವಳ ಜೀವನದಲ್ಲಿ ಬದಲಾವಣೆಗಳಾಗಬಹುದು. ಮಹಿಳೆಯ ಆರ್ಥಿಕ ಸಬಲೀಕರಣ ರಾಜಕೀಯ ಸಬಲೀಕರಣದ ಮೂಲಕ ಕಾಣಬಹುದೆಂದು ಮಹಿಳಾ ಸಂಘಗಳು ಸರ್ಕಾರವನ್ನು ಒತ್ತಾಯಿಸತೊಡಗಿದವು. ರಾಜಕೀಯ ಕ್ಷೇತ್ರವು ಪ್ರಬಲವಾಗಿದ್ದು, ಅಲ್ಲಿಂದಲೇ ಸಾಮಾಜಿಕ ನೀತಿ-ನಿಯಮಗಳು, ಕಾನೂನುಗಳು, ಅಭಿವೃದ್ಧಿ ಯೋಜನೆಗಳು ಹಾಗೂ ಸಬಲೀಕರಣ ಪ್ರಕ್ರಿಯೆಗಳು

ನಡೆಯುತ್ತವೆ. ಮಹಿಳೆಯರು ಸಶಕ್ತರಾಗಲು ಅವಶ್ಯಕವಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಯೋಜನೆಗಳಲ್ಲಿ ಹೆಚ್ಚೆಚ್ಚು ಮಹಿಳೆಯರು ಭಾಗವಹಿಸುವುದರಿಂದ ಅವರ ಸಮಸ್ಯೆಗಳನ್ನು ಅವರೇ ಗುರುತಿಸಿ, ಅವುಗಳ ಪರಿಹಾರ ಕಾರ್ಯದಲ್ಲಿ ಭಾಗಿಯಾಗುವುದರಿಂದ ಮಹಿಳಾ ಸಮಸ್ಯೆಗಳು ನಿವಾರಣೆಯಾಗುತ್ತವೆ. ಈ ಮೂಲಕ ತಲತಲಾಂತರದಿಂದ ರೂಪಿತವಾಗಿದ್ದ ಪುರುಷ ಕೇಂದ್ರಿತ ಸಾಮಾಜಿಕ ವ್ಯವಸ್ಥೆ ಏಕಾಕಾರವಾಗಿ ರೂಪಿತವಾಗದೇ, ಮಹಿಳೆಯ ಮಹತ್ವ ನೀಡುತ್ತವೆ. ಮಹಿಳಾಪರ ಯೋಜನೆಗಳು ಚರ್ಚಿತವಾಗತೊಡಗಿದವು. ಮಹಿಳೆಯರ ದೇಹ, ಮನಸ್ಸಿನ ಮೇಲೆ ನಿಯಂತ್ರಣ ಸಾಧಿಸುತ್ತ ಅವಳ ಬೌದ್ಧಿಕ ವಿಚಾರಗಳನ್ನು ಹತ್ತಿಕ್ಕುವ ಪುರುಷ ಪ್ರಧಾನ ವ್ಯವಸ್ಥೆಯನ್ನು ವಿರೋಧಿಸತೊಡಗಿದರು. ಪುರುಷರ ಸಮಸ್ಯೆಗಳನ್ನು ಸಾರ್ವತ್ರಿಕ ಸಮಸ್ಯೆಗಳೆಂದು ಸಾರಿದರೆ, ಮಹಿಳೆಯರ ಸಮಸ್ಯೆಗಳನ್ನು ವ್ಯಕ್ತಿಗತ ಎಂದು ಬಗೆದಿರುವುದನ್ನು ಅಲ್ಲಗಳೆಯಲಾರಂಭಿಸಿದರು. ಪಿತೃ ಪ್ರಧಾನ ಸಮಾಜಕ್ಕೆ ಪುರುಷರ ಅನುಭವ, ಅನಿಸಿಕೆಗಳೇ ಮೂಲಾಧಾರಗಳೆಂದು ಪರಿಗಣಿಸಲ್ಪಟ್ಟಿದ್ದನ್ನು ಪ್ರಶ್ನಿಸಿ ಪಿತೃ ಪ್ರಧಾನ ವ್ಯವಸ್ಥೆಯ ಮೂಲಕವಾಗಿ ರಚಿತವಾದ ಸಾಮಾಜಿಕ ಮೌಲ್ಯಗಳು ಪುರುಷರಿಗೆ ಅನುಕೂಲಕರವಾಗಿರುವದನ್ನು ವಿರೋಧಿಸತೊಡಗಿದರು. ಮಹಿಳೆಯರಿಗೆ ಶಿಕ್ಷಣ ಅವಕಾಶ ನಿರಾಕರಿಸಿದ್ದನ್ನು ಪ್ರಶ್ನಿಸಿ, ಧೈರ್ಯ-ಬುದ್ಧಿವಂತಿಕೆ, ಕ್ರಿಯಾಶೀಲತೆ, ಸ್ವತಂತ್ರ ಮನೋಭಾವ ಮಹಿಳೆಯಲ್ಲಿದ್ದರೂ 'ನೀತಿ' 'ಸಂಪ್ರದಾಯ' ಮೂಲಕ ಮಹಿಳೆಯನ್ನು ಅದೃಶ್ಯಗೊಳಿಸಿದ್ದನ್ನು ವಿರೋಧಿಸತೊಡಗಿದರು. ಇದರ ಫಲಿತವಾಗಿ ಉನ್ನತ ವರ್ಗದ ಮಹಿಳೆಯರಿಗೆ ಶಿಕ್ಷಣ ಅವಕಾಶ ನೀಡುವ ಉದ್ದೇಶವನ್ನು ಸಾಮಾಜಿಕ ವ್ಯವಸ್ಥೆ ಹೊಂದಿತ್ತಾದರೂ ಮನೆಯಲ್ಲಿಯೇ ಶಿಕ್ಷಣ ಕಲಿಯಬೇಕು ಎಂದು ಷರತ್ತನ್ನು ವಿಧಿಸಿತು. ಉನ್ನತ ವರ್ಗದ ಮಹಿಳೆಯರು ಶಿಕ್ಷಿತರಾಗಿ, ಉಳಿದ ಮಹಿಳೆಯರಿಗೆ ಮಹಿಳಾಪರ ಆಲೋಚನೆಗಳ ಅಗತ್ಯತೆಯನ್ನು ತಿಳಿಸತೊಡಗಿದರು.

ಕುಟುಂಬದೊಳಗೆ. ಮಹಿಳೆಯರು ಮಾಡುವ ಕಾರ್ಯಗಳು ಆದಾಯದ ಮನ್ನಣೆಯನ್ನು ಪಡೆಯಲಾರದ್ದನ್ನು ಪ್ರಶ್ನಿಸಿ, ಮಹಿಳೆ ಆತ್ಮವಿಶ್ವಾಸದಿಂದ ಸಂಪನ್ಮೂಲಗಳ ಮೇಲೆ ಹಿಡಿತ ಸಾಧಿಸುವ ಸಾಮರ್ಥ್ಯ, ಅರ್ಹತೆ ಹಾಗೂ ಆಸಕ್ತಿ ಹೊಂದಿರುವಳೆಂದು ಮಹಿಳಾ ಚಿಂತಕರು, ಮಹಿಳಾ ಹೋರಾಟಗಾರರು ಸ್ತ್ರೀವಾದಿಗಳು ಬರಹಗಳ ಮೂಲಕ, ಕಮ್ಮಟಗಳ ಮೂಲಕ ಮಹಿಳೆಯರಲ್ಲಿ ಜಾಗೃತಿ ಮೂಡುವಂತೆ ಮಾಡಿದರು. ಇದರ ಫಲವಾಗಿ ಮಹಿಳಾ ವಿಶ್ವವಿದ್ಯಾಲಯಗಳು ಮಹಿಳಾ ಅಧ್ಯಯನ ಕೇಂದ್ರಗಳು ರಚಿತವಾದವು. ಮಹಿಳಾಪರ ಹೋರಾಟದಲ್ಲಿ ಮಹಿಳಾ ಬ್ಯಾಂಕ್, ಮಹಿಳಾ ಸಂಘ-ಸಂಸ್ಥೆಗಳು ಭಾಗಿಗಳಾದವು. ಕುಟುಂಬ ಕೇಂದ್ರಿತವಾಗಿ ಪರಿಗಣಿಸಲ್ಪಟ್ಟ ಮಹಿಳೆ, ಕುಟುಂಬದಾಚೆಗೆ ಬಂದು ತನ್ನ ಸಾಮರ್ಥ್ಯವನ್ನು ಕೌಶಲ್ಯತೆಯನ್ನು ತೋರಲಾರಂಭಿಸಿದಳು.

ರಾಷ್ಟ್ರ ಯೋಜನೆ ರೂಪಿಸುವ, ಕಾರ್ಯರೂಪಕ್ಕೆ ತರುವ ಪ್ರಕ್ರಿಯೆಯಲ್ಲಿ ಮಹಿಳೆಯ ಭಾಗವಹಿಸುವಿಕೆ ಅತಿ ಅವಶ್ಯಕವೆಂದು ಸ್ತ್ರೀವಾದಿಗಳು, ಮಹಿಳಾ ಸಂಘಟನೆಗಳು ಸರ್ಕಾರದ ಮೇಲೆ ಒತ್ತಡ ತರಲಾರಂಭಿಸಿದರು. ಸ್ವಾತಂತ್ರ್ಯ ನಂತರದಲ್ಲಿ ಸಂವಿಧಾನ ರಚನಾಕಾರರು ಭಾರತೀಯರ ಪುನರುಜ್ಜೀವನಕ್ಕೆ ಹೆಚ್ಚಿನ ಮಹತ್ವ ನೀಡಿದರು. ಭಾರತ ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಡಾ.ಬಿ.ಆರ್. ಅಂಬೇಡ್ಕರ್‌ರವರು ರಾಷ್ಟ್ರದ ಅಭ್ಯುದಯದಲ್ಲಿ ಸ್ತ್ರೀ-ಪುರುಷರ ಸ್ಥಾನ ಸಮವಾಗಿರಬೇಕು, ಪ್ರಜಾಪ್ರಭುತ್ವದಲ್ಲಿ ಅಧಿಕಾರ ಜನರಿಂದ ಜನರಿಗಾಗಿ ಬೆಳೆಸುವ ಸಾಧನವಾಗಬೇಕೆಂದರು. ಸಮಾಜದ ಅಂಚಿನಲ್ಲಿರುವ ಶೋಷಿತ ವರ್ಗ ಹಾಗೂ ಆ ವರ್ಗದ ಮಹಿಳೆಯರಿಗೆ ಸಮಾನತೆ, ಸ್ವಾತಂತ್ರ್ಯ ಒದಗಿಸಬೇಕು, ಅಧಿಕಾರ ಹಂಚಿಕೆಯಲ್ಲಿ ಸ್ತ್ರೀ-ಪುರುಷರಿಗೆ ಸಮಾನ ಅವಕಾಶವನ್ನು ನೀಡಬೇಕು. ವಿಕೇಂದ್ರಿಕರಣ ಪದ್ಧತಿಯಿಂದ ಸಂವಿಧಾನದ ೪೦ ನೇ ವಿಧಿಯಲ್ಲಿ ರಾಜ್ಯಗಳು ಸ್ಥಳೀಯ ಸರ್ಕಾರಗಳನ್ನು ಸ್ಥಾಪಿಸುವ ಪ್ರಯತ್ನ ಮಾಡಲಿ ಎಂಬುದು ಸಂವಿಧಾನದ ರಚನಾಕಾರರ ಉದ್ದೇಶವಾಗಿತ್ತು. ೧೯೫೭ ಜನೇವರಿಯಲ್ಲಿ ಶ್ರೀ.ಬಲವಂತರಾಯ್ ಮೆಹ್ತಾರವರ ನೇತೃತ್ವದಲ್ಲಿ ಸರ್ಕಾರ ಸಮಿತಿಯನ್ನು ನೇಮಿಸಿತು. ರಾಷ್ಟ್ರದ ಸಂಪನ್ಮೂಲ ಹಾಗೂ ಅಧಿಕಾರ ಕೇಂದ್ರದಲ್ಲಿ ಮಹಿಳೆಯರ ಭಾಗವಹಿಸುವಿಕೆ ಈ ಸಮಿತಿಯ ಮುಖ್ಯ ಉದ್ದೇಶವಾಗಿತ್ತು. ರಾಷ್ಟ್ರ-ರಾಜ್ಯ ಆಡಳಿತದ ಅಧಿಕಾರ ಹಾಗೂ ಕರ್ತವ್ಯಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಬಹಳ ಮುಖ್ಯವಾದುದೆಂದರು. ಗ್ರಾಮಪಂಚಾಯತಿಯ ಆಡಳಿತ ಹಾಗೂ ಸಮುದಾಯ ಅಭಿವೃದ್ಧಿ ಯೋಜನೆಗಳಲ್ಲಿ ಸಮನ್ವಯತೆಯನ್ನು ತರುವುದು ಈ ಸಮಿತಿಯ ಮುಖ್ಯ ಉದ್ದೇಶವಾಗಿತ್ತು. ಈ ಸಮಿತಿಯು ಗ್ರಾಮಮಟ್ಟದಲ್ಲಿ ಗ್ರಾಮಪಂಚಾಯತಿ, ಬ್ಲಾಕ್ ಮಟ್ಟದಲ್ಲಿ ಪಂಚಾಯತ ಸಮಿತಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ತುಗಳನ್ನು ಶಿಫಾರಸ್ಸು ಮಾಡಿತು. ಶ್ರೀ.ಬಲವಂತರಾಯ್ ಸಮಿತಿಯಿಂದ ಮಹಿಳೆಯರಿಗೆ ಪ್ರಾತಿನಿಧ್ಯ ನೀಡುವ ಕುರಿತಾಗಿ ವರದಿಯಲ್ಲಿ ಪ್ರಸ್ಥಾಪಿಸಲಾಗಿದೆ.

ಈ ರೀತಿಯಲ್ಲಿ ರೂಪಗೊಂಡ ಸ್ಥಳೀಯ ಸರ್ಕಾರಗಳು ಒಂದು ನಿರ್ಧಿಷ್ಟ ಪ್ರದೇಶದ ಜನರಿಂದ ಆಯ್ಕೆಯಾದ ಪ್ರತಿನಿಧಿಗಳಿಂದ ಕೂಡಿದ್ದು, ನಾಗರಿಕರ ಮೂಲಭೂತ ಸಮಸ್ಯೆಗಳನ್ನು ನಿವಾರಿಸುವದಕ್ಕಾಗಿ ಕಾರ್ಯ ಮಾಡುವ ಗುರಿಯನ್ನಿಟ್ಟುಕೊಂಡಿದ್ದವು. ಪ್ರಜೆಗಳಿಗೆ ಆಡಳಿತದ ತರಬೇತಿ ಹಾಗೂ ರಾಜಕೀಯ ಜ್ಞಾನವನ್ನು ನೀಡುವ, ಮುಂದಿನ ನಾಯಕರಿಗೆ ತರಬೇತಿ ನೀಡುವ ತಳಮಟ್ಟದ ಸಂಸ್ಥೆಯಾಗಿ ಗುರುತಿಸಿಕೊಂಡಿತು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಕಾರ್ಯಭಾರವನ್ನು ಕಡಿಮೆಗೊಳಿಸಿ ಆಡಳಿತದಲ್ಲಿ ಲಿಂಗ ತಾರತಮ್ಯವಿಲ್ಲದ ಸಮಾನತೆ ಮೂಡಿಸುವ ಉದ್ದೇಶವನ್ನು ಹೊಂದಿತ್ತು. ಬಲವಂತರಾಯ್ ಮೆಹ್ತಾ ಸಮಿತಿಯ ಶಿಫಾರಸ್ಸನ್ನು ೧೯೫೮ ರಲ್ಲಿ 'ರಾಷ್ಟ್ರೀಯ ಅಭಿವೃದ್ಧಿ ಮಂಡಳ' ಅನುಮೋದಿಸಿತು.

೧೯೫೯ ರಲ್ಲಿ ಪಂಚಾಯತ್ ರಾಜ್ ಪದ್ಧತಿಯನ್ನು ಮೊಟ್ಟಮೊದಲು ಬಳಕೆಯಲ್ಲಿ ತಂದಿದ್ದು ರಾಜಸ್ಥಾನ ಸರ್ಕಾರ. ಈ ವ್ಯವಸ್ಥೆಯ ಮೂಲಕ ಮಹಿಳೆಯರಿಗೆ ನೀಡಿರುವ ಪ್ರಾತಿನಿಧ್ಯವನ್ನು ರಾಜಸ್ಥಾನ ಸರ್ಕಾರ ಕಾರ್ಯರೂಪಕ್ಕೆ ತರುವಲ್ಲಿ ವಿಫಲವಾಯಿತು. ಕೇಂದ್ರ ಸರ್ಕಾರ ೧೯೭೪ ರಲ್ಲಿ ಗ್ರಾಮಪಂಚಾಯತಿಯಲ್ಲಿ ಮಹಿಳೆಯರಿಗೆ ತಳಸಮುದಾಯದವರಿಗೆ, ಪರಿಶಿಷ್ಟ ಜಾತಿ ಜನಾಂಗದ ಮಹಿಳೆಯರಿಗಾಗೆ ಶೇಕಡ ೩೦ ರಷ್ಟು ಸ್ಥಾನಗಳನ್ನು ಮೀಸಲಾಗಿಡುವ ಬಗ್ಗೆ ಗಂಭೀರವಾಗಿ ಚರ್ಚಿಸಲಾರಂಭಿಸಿತು. ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಪುನರ್ ಜೀವಿತಗೊಳಿಸಲು, ಮಹಿಳೆಯರಿಗೆ ಶೇಕಡ ೩೦ ರಷ್ಟು ಸ್ಥಾನಗಳನ್ನು ತಳಮಟ್ಟದ ಅಧಿಕಾರ ಕೇಂದ್ರದಲ್ಲಿ ನೀಡಿದ್ದನ್ನು ಹಲವಾರು ನಾಗರಿಕರು ವಿರೋಧಿಸಿದರು. ಮಹಿಳೆಯರಿಗೆ ಪ್ರತ್ಯೇಕ ಸ್ಥಾನಗಳನ್ನು ನೀಡಬೇಕೆಂಬ ನೀತಿಯ ರೀತಿಯನ್ನು 'ಪುಲರೇನು ಮಹಾ' ಮತ್ತು 'ಮಣಿಬೇನ್ ತಾರಾ' ರವರು ವಿರೋಧಿಸಿದರು. ಈ ರೀತಿಯ ಮೀಸಲಾತಿ ಪದ್ಧತಿಯಿಂದ ಮೀಸಲಾತಿ ಸ್ಥಾನಗಳಲ್ಲಷ್ಟೇ ಮಹಿಳೆಯರಿಗೆ ಪ್ರಾತಿನಿಧ್ಯ ನೀಡಲಾಗುತ್ತದೆಂದು ವಾದಿಸಿದರು.

೧೯೭೦ರ ನಂತರದಲ್ಲಿ ಮಹಿಳೆಯನ್ನು ಅಭಿವೃದ್ಧಿ ರಾಜಕಾರಣದ ನೆಲೆಯಲ್ಲಿ ಪರಿಭಾವಿಸಲಾಯಿತು. ಸರೋಜಿನಿ ನಾಯ್ಡುರವರ ನೇತೃತ್ವದಲ್ಲಿನ ಮತದಾನದ ಹಕ್ಕೊತ್ತಾಯ, 'ಸಮಾನತೆಯಡೆಗೆ' ಸಮಿತಿಯ ಚರ್ಚೆ ಹಾಗೂ ಅಂತಾರಾಷ್ಟ್ರೀಯ ಮಹಿಳಾ ವರ್ಷದ ಚರ್ಚೆ ಮೂಲಕ ಬೆಳಕಿಗೆ ಬಂದ ಮಹಿಳೆಯರ ಸಮಸ್ಯೆಗಳು, ಅಧಿಕಾರ ಹಂಚಿಕೆಯಲ್ಲಿನ ತಾರತಮ್ಯ, ಅನ್ಯಾಯ, ನಿರ್ವಚನೆಗಳು ಮಹಿಳೆಯರ ಬಗೆಗಿನ ಬರಹಗಳು, ಭಾರತೀಯ ಮಹಿಳೆಯನ್ನು ಪರಿಭಾವಿಸುವ ಪರಿಯನ್ನು ಪ್ರಶ್ನಿಸಿದವು. ಈ ಹಿನ್ನೆಲೆಯಲ್ಲಿ ಜನತಾ ಸರ್ಕಾರ ೧೯೭೭ ರಲ್ಲಿ ಪಂಚಾಯತಿ ಸಂಸ್ಥೆಗಳನ್ನು ಬಲಪಡಿಸಲು ಅಶೋಕ ಮೆಹ್ತಾ ನೇತೃತ್ವದಲ್ಲಿ ಸಮಿತಿಯೊಂದನ್ನು ನೇಮಿಸಿತು. ಕುಟುಂಬ, ಜಾತಿ, ಧರ್ಮದ ಮೂಲಕ ಮಹಿಳೆಯ ಸ್ಥಾನಮಾನಗಳನ್ನು ಗೌಣವಾಗಿರಿಸುವ ಪರಿಯನ್ನು ಹಲವಾರು ಸ್ತ್ರೀವಾದಿಗಳು ಹಾಗೂ ಮಹಿಳಾ ಪರ ಸಂಸ್ಥೆಗಳು ವಿರೋಧಿಸಿದವು. ರಾಷ್ಟ್ರ ರಾಜಕಾರಣದಲ್ಲಿ ಮಹಿಳೆ ತನ್ನನ್ನು ತಾನು ತೊಡಗಿಸಿಕೊಂಡಾಗಲೂ ಪುರುಷ ಪ್ರಧಾನ ವ್ಯವಸ್ಥೆ ಅವಳನ್ನು ಗುರುತಿಸಿದ್ದು ದೇಶ ವಿಮೋಚನೆ ಹೋರಾಟದಲ್ಲಿ ಮಾತ್ರ. ೧೯೭೮ ರಲ್ಲಿ ಅಶೋಕ ಮೆಹ್ತಾ ಸಮಿತಿ ಪಂಚಾಯತ್ ವ್ಯವಸ್ಥೆ ಕುರಿತು ವರದಿ ಸಲ್ಲಿಸಿತು. ಅದರನ್ವಯ ಪರಿಶಿಷ್ಟ ವರ್ಗ, ಪರಿಶಿಷ್ಟ ಪಂಗಡದ, ಹಿಂದುಳಿದವರ ಮಹಿಳೆಯರಿಗೆ ಸ್ಥಳೀಯ ಸರ್ಕಾರದಲ್ಲಿ ಪ್ರಾತಿನಿಧ್ಯ ನೀಡುವ ಪ್ರಕ್ರಿಯೆಗೆ ಒತ್ತುಕೊಟ್ಟಿತು. ಮಹಿಳೆಯರಿಗೆ ಹಾಗೂ ಸಾಮಾಜಿಕ ವ್ಯವಸ್ಥೆಯ ಅಂಚಿನಲ್ಲಿರುವ ಶೋಷಿತ ಮಹಿಳೆಯರಿಗೆ ನ್ಯಾಯವಾಗಿ ಸಿಗಬೇಕಾದ ಸ್ಥಾನದ ಸ್ಪಷ್ಟತೆ ಬಗ್ಗೆ ತಿಳಿಸಿತ್ತು. ೧೯೮೩ರಲ್ಲಿ ಕರ್ನಾಟಕ ಸರ್ಕಾರ ಸ್ಥಾನಿಕ ಚುನಾವಣೆಯಲ್ಲಿ ಪ್ರತಿಶತ ೨೫ ರಷ್ಟು ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಾಗಿಡುವ ಕಾಯ್ದೆ ಪಾಸು ಮಾಡಿತು. ಈ ಕಾಯ್ದೆ ೧೯೮೭ ರಿಂದ ಜಾರಿಯಲ್ಲಿ ಬಂದಿತು. ಅಧಿಕಾರ ವಿಕೇಂದ್ರಿಕರಣದಿಂದ ಪ್ರೇರಿತವಾದ ಕೇಂದ್ರ ಸರ್ಕಾರ

ಪಂಚಾಯತ್ ವ್ಯವಸ್ಥೆಗೆ ಸಂವಿಧಾನಾತ್ಮಕ ಖಚಿತತೆ ನೀಡುವ ಪ್ರಕ್ರಿಯೆಯನ್ನು ೧೯೮೯ ರಲ್ಲಿ ಪ್ರಾರಂಭಿಸಿತು. ರಾಜಕೀಯ ವಲಯದಲ್ಲಿ ಮಹಿಳೆಯರು ಬಹುಸಂಖ್ಯೆಯಲ್ಲಿ ಭಾಗವಹಿಸುವ ಮೂಲಕ ಅಧಿಕಾರ ಸಂರಚನೆಯಲ್ಲಿ ಪಾಲ್ಗೊಳ್ಳುವ ಪ್ರಕ್ರಿಯೆಗೆ, ಗ್ರಾಮಪಂಚಾಯತಿ ತಳಮಟ್ಟದ ತರಬೇತಿ ಕೇಂದ್ರವಾಯಿತು.

೧೯೯೧ರಲ್ಲಿ ಲೋಕಸಭೆಯಲ್ಲಿ ಪಂಚಾಯತ್‌ರಾಜ್ ಕಾನೂನಿಗೆ ತಿದ್ದುಪಡಿ ಮಾಡುವ ಮಸೂದೆಯನ್ನು ಮಂಡಿಸಲಾಯಿತು. ಸಂಸತ್ತಿನ ಸಂಯುಕ್ತ ಸಮಿತಿ ಈ ತಿದ್ದುಪಡೆಯ ವಿಧೇಯಕವನ್ನು ಪರಿಶೀಲಿಸಿ ಒಪ್ಪಿಗೆ ಸೂಚಿಸಿತು. ಈ ಸಮಿತಿಯ ವರದಿಯ ಆಧಾರದ ಮೇಲೆ ೧೯೯೨ ಡಿಸೆಂಬರ ೨೨ ರಂದು ಲೋಕಸಭೆ, ಡಿಸೆಂಬರ್ ೨೩ ರಂದು ರಾಜ್ಯಸಭೆ ಪಂಚಾಯತ್‌ರಾಜ್ ತಿದ್ದುಪಡೆ ಮಸೂದೆಯನ್ನು ಅನುಮೋದಿಸಿದವು. ಅರ್ಧಕ್ಕಿಂತ ಹೆಚ್ಚು ರಾಜ್ಯಗಳ ಶಾಸನಸಭೆಗಳು ಈ ಮಸೂದೆಯನ್ನು ಸ್ವೀಕರಿಸಿದವು. ೧೯೯೩ ರ ಏಪ್ರಿಲ್ ೨೦ ರಂದು ರಾಷ್ಟ್ರಪತಿ ಮಸೂದೆಗೆ ಅಂಗೀಕಾರ ನೀಡಿದರು. ೧೯೯೩ ಏಪ್ರಿಲ್ ೨೪ ರಂದು ಪಂಚಾಯತ್‌ರಾಜ್ ಶಾಸನ ಜಾರಿಗೆ ಬಂದಿತು. ಈ ತಿದ್ದುಪಡಿಯನ್ನು ೭೩ ಮತ್ತು ೭೪ ರ ತಿದ್ದುಪಡೆ ಕಾಯ್ದೆ ಎಂದು ಕರೆಯಲಾಯಿತು. ಇದರನ್ವಯ ಸ್ಥಳೀಯ ಚುನಾವಣೆಗಳಲ್ಲಿ ಮಹಿಳೆಯರಿಗೆ ಶೇ. ೩೩.೩೩ ರಷ್ಟು ಪ್ರಾತಿನಿಧ್ಯ ಸಿಗುವಂತಾಯಿತು.

ಇತಿಹಾಸದುದ್ದಕ್ಕೂ ಗಮನಿಸಿದಾಗ ಗ್ರಾಮೀಣ ಪರಿಸರದ ಮಹಿಳೆಯರು ಪಂಚಾಯಿತಿ ನಡೆಯುವ ಚಾವಡಿ ಕಡೆ ನೋಡುವುದೂ ಅಪರಾಧವಾಗಿತ್ತು. ಆದರೆ ಇಂದಿನ ಮಹಿಳೆ ಕೌಟುಂಬಿಕ ಚೌಕಟ್ಟನ್ನು ಮೀರಿ ಹೊರನಡೆದು ಆತ್ಮವಿಶ್ವಾಸದಿಂದ ಸ್ವ-ಇಚ್ಛಾ ಶಕ್ತಿಯಿಂದ ಗ್ರಾಮ ಅಭಿವೃದ್ಧಿ ಕಾರ್ಯಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಿರುವಳು. ಆದರೆ ಪಂಚಾಯತ್‌ರಾಜ್ ವ್ಯವಸ್ಥೆ ಮಹಿಳೆಗೆ ಪ್ರಾತಿನಿಧ್ಯ ಕೊಡುವ ನಿಟ್ಟಿನಲ್ಲಿ ನಿಲುವುಗಳನ್ನು ತೆಗೆದುಕೊಂಡಿದ್ದಾದರೂ ಸಮಗ್ರವಾದ ಒಂದು ನೀತಿಯನ್ನು ರೂಪಿಸುವಲ್ಲಿ ವಿಫಲವಾಗಿದೆ. ಪುರುಷ ಪ್ರಧಾನ ರಾಜಕೀಯ ವ್ಯವಸ್ಥೆಯ ವ್ಯವಸ್ಥಿತ ಸಂಚಿದು.

೧೯೯೨ ರ ಸಂವಿಧಾನ ತಿದ್ದುಪಡಿಯಂತೆ ಸಂಪೂರ್ಣವಾಗಿ ಭಾರತದಲ್ಲಿ ಸ್ಥಳೀಯ ಸಂಸ್ಥೆಗಳ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿದ ನಂತರ ಸ್ವಾಭಾವಿಕ ಮುಂದುವರಿಕೆಯಾಗಿ ರಾಜ್ಯ-ರಾಷ್ಟ್ರ ಶಾಸನಸಭೆಯಲ್ಲಿ ಮಹಿಳಾ ಮೀಸಲಾತಿ ಕಲ್ಪಿಸುವುದರ ಬಗ್ಗೆ ಮಹಿಳೆಯರು ಸರ್ಕಾರವನ್ನು ಒತ್ತಾಯಿಸಿದರು. ಮಹಿಳೆಯರನ್ನು ಸಾಮಾಜಿಕ ವ್ಯವಸ್ಥೆ ಉಪೇಕ್ಷಿಸುತ್ತದೆ ಎಂದು ಸ್ತ್ರೀವಾದಿಗಳು, ಮಹಿಳಾಪರ ಚಿಂತಕರು ವಾದಿಸುತ್ತಾ 'ಸಾರಾಯಿ, ಹಣ, ಗೂಂಡಾಗಿರಿ' ಮಹಿಳೆಗೆ ಬಲು ದೂರ. ರಾಜಕೀಯ ವಲಯದಲ್ಲಿ ನಡೆಯುವ ಮೋಸ, ಭ್ರಷ್ಟಾಚಾರ ನಿರ್ಮೂಲನೆಗೆ ಮಹಿಳೆ ಸೂಕ್ತವೆಂದು

ಬಗೆದರು. ಶುದ್ಧವಾದ, ಸರಳವಾದ ನಿರ್ಭಯವಾದ ಚುನಾವಣೆ ನಡೆದು, ಮಹಿಳೆ ಹೆಚ್ಚು ಸಂಖ್ಯೆಯಲ್ಲಿ ಭಾಗವಹಿಸಬೇಕು. ಮಹಿಳೆಯರ ಸಮಸ್ಯೆಗಳು ಕೌಟುಂಬಿಕ ಸಮಸ್ಯೆಗಳಿಂದ ರಾಜಕೀಯ ಸಮಸ್ಯೆಗಳಾಗಿ ರೂಪಗೊಳ್ಳಬೇಕು. ರಾಷ್ಟ್ರದ ಅಭಿವೃದ್ಧಿ ಕಾರ್ಯಗಳಲ್ಲಿ ಮಹಿಳೆಯ ಭಾಗವಹಿಸುವಿಕೆ, ರಾಜಕೀಯ ಪಕ್ಷಗಳ ನಿರ್ಣಯ ನಿರೂಪಣಾ ಘಟಕಗಳಲ್ಲಿ ಮಹಿಳೆಯರ ಬಹುಪಾಲು, ಶಾಸನ ನಿರೂಪಣಾ ನಿರ್ಣಯಗಳಲ್ಲಿ ಹಾಗೂ ಕಾನೂನು ರಚನೆ ನಿರೂಪಣೆಯಲ್ಲಿ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿರಬೇಕು ಎಂಬುದು ಮಹಿಳೆಯರ ಒತ್ತಾಸೆಯಾಯಿತು.

ವಿಶ್ವದ ಎಲ್ಲಾ ಮಹಿಳೆಯರು ಶಾಸನ ರೂಪಿಸುವ ಪ್ರಕ್ರಿಯೆಯಲ್ಲಿನ ಮಹಿಳಾ ಭಾಗವಹಿಸುವಿಕೆಗೆ ಒತ್ತಾಯಿಸತೊಡಗಿದರು. ೧೯೯೫ರ ಸೆಪ್ಟೆಂಬರ್‌ದಲ್ಲಿ ಬೀಜಿಂಗ್‌ನಲ್ಲಿ ವಿಶ್ವಸಂಸ್ಥೆ ವತಿಯಿಂದ ನಡೆದ ನಾಲ್ಕನೇಯ ಜಾಗತಿಕ 'ಮಹಿಳಾ ಸಮ್ಮೇಳನ'ದಲ್ಲಿ ಮಹಿಳೆಯರಿಗೆ ಮತದಾನದ ಹಕ್ಕಿದ್ದರೆ ಮಾತ್ರ ಸಾಲದು, ಅಧಿಕಾರ ಕೇಂದ್ರದಲ್ಲಿ, ಶಾಸನ ನಿರೂಪಿಸುವಲ್ಲಿ, ನ್ಯಾಯ ಕಲ್ಪಿಸುವಲ್ಲಿ ಮಹಿಳೆಯರಿಗೆ ಹೆಚ್ಚು ಅವಕಾಶವಿರುವಂತಿರಬೇಕು. ಮಹಿಳೆ ಜನಪ್ರತಿನಿಧಿಯಾಗಿ ರೂಪಗೊಳ್ಳುವ ಅವಕಾಶವನ್ನೆ ಪುರುಷ ಪ್ರಧಾನ ವ್ಯವಸ್ಥೆ ನೀಡುವುದಿಲ್ಲ. ಅಲ್ಪಸಂಖ್ಯಾತ ಮಹಿಳಾ ರಾಜಕಾರಣಿಗಳು ಪುರುಷ ರಾಜಕಾರಣಿಗಳಗಿಂತ ಭಿನ್ನವಾಗಿ ತಮ್ಮನ್ನು ರೂಪಿಸಿಕೊಳ್ಳುವ ಸವಾಲನ್ನು ಸ್ವೀಕರಿಸಿದವರಾಗಿದ್ದಾರೆಂಬ ವಾದ ಮಹಿಳೆಯರದಾಯಿತು. ೧೯೯೬ ರ ಸೆಪ್ಟೆಂಬರ್ ೭ ರಂದು ಪ್ರಥಮಬಾರಿಗೆ 'ಮಹಿಳಾ ಮೀಸಲಾತಿ' ವಿಧೇಯಕವನ್ನು ಲೋಕಸಭೆಯಲ್ಲಿ ಶ್ರೀ ದೇವೇಗೌಡರ ನೇತೃತ್ವದಲ್ಲಿ ಸಂವಿಧಾನದ ೮೧ ನೇ ತಿದ್ದುಪಡಿ ಮಸೂದೆ ಅನ್ವಯ ಮಂಡಿಸಲಾಯಿತು. ಆದರೆ 'ಮಹಿಳಾ ಮೀಸಲಾತಿ' ವಿಧೇಯಕವನ್ನು ಹಲವಾರು ರಾಜಕೀಯ ಪಕ್ಷಗಳು ವಿರೋಧಿಸಿದವು. ಮಹಿಳೆಯರಿಗೆ ಅಧಿಕಾರ ಹಂಚಿಕೆ ಅಧಿಕಾರವನ್ನು ಬಿಟ್ಟುಕೊಡಲು ಸಿದ್ದರಿರಲಿಲ್ಲ. ಹಲವಾರು ವಾದ-ವಿವಾದಗಳ ನಡುವೆ ಪರ-ವಿರೋಧಗಳ ನಡುವೆ ವಿದೇಯಕವನ್ನು ಪರಾಮರ್ಶಿಸುವಂತೆ ಆಯ್ಕೆ ಸಮಿತಿಗೆ ಕಳುಹಿಸಲಾಯಿತು. ಆಯ್ಕೆ ಸಮಿತಿಯಲ್ಲಿ 'ಗೀತಾ ಮುಖರ್ಜಿ' ಮೀಸಲಾತಿ ಪರವಾಗಿದ್ದರಿಂದ ಹೆಚ್ಚಿನ ಕಡತಕ್ಕೊಳಗಾಗಲಿಲ್ಲ. ನಂತರ ೧೯೯೭ರ ಆಗಸ್ಟ್‌ನಲ್ಲಿ ಪ್ರಧಾನಿ ಐ.ಕೆ ಗುಜ್ರಾಲ್ ರವರ ನೇತೃತ್ವದಲ್ಲಿ ಮತ್ತೆ 'ಮಹಿಳಾ ಮೀಸಲಾತಿ' ಮಸೂದೆಯನ್ನು ಮಂಡಿಸಲಾಯಿತು. ಆಡಳಿತ ಪಕ್ಷದವರಾಗಿದ್ದ ಶರದ್‌ಯಾದವ್ ನೇತೃತ್ವದ ಹಲವಾರು ಪಕ್ಷಗಳ ಸದಸ್ಯರು, ಮುಖಂಡರು ಮಸೂದೆಯನ್ನು ತಿರಸ್ಕರಿಸಿದರು. ಲೋಕಸಭೆ ಹಾಗೂ ರಾಜ್ಯ ಸಭೆಯ ಒಟ್ಟು ಸದಸ್ಯರಲ್ಲಿಯ ೨/೩ ರಷ್ಟು ಸದಸ್ಯರ ಒಪ್ಪಿಗೆ ಅವಶ್ಯಕವಾಗಿತ್ತು. ಆದರೆ ಪುರುಷ ರಾಜಕಾರಣಿಗಳು ಮತ್ತೆ ಮಹಿಳೆಯನ್ನು ಕೌಟುಂಬಿಕ ಹಿನ್ನೆಲೆಯಿಂದ ಗುರುತಿಸಿದರು. ನಂತರದ ವರ್ಷದಲ್ಲಿ ಅಧಿಕಾರಕ್ಕೆ ಬಂದ ಬಿ.ಜೆ.ಪಿ. ನೇತೃತ್ವದ ಮಿತ್ರಪಕ್ಷಗಳ ಸರ್ಕಾರ 'ಮಹಿಳಾ ಮೀಸಲಾತಿ' ಮಸೂದೆ ಪರ ಹೆಚ್ಚಿನ ಒಲವು ತೋರಿಸಿದಾಗ, ವಿಧೇಯಕ ಸ್ವೀಕೃತವಾಗುತ್ತದೆಂದು ಎಲ್ಲರೂ ನಂಬಿದ್ದರು. ಆದರೆ ವಿದೇಯಕವನ್ನು

ಲೋಕಸಭೆಯಲ್ಲಿ ಮಂಡಿಸಿದಾಗ, ಮಹಿಳೆಗೆ ಪ್ರತಿಶತ ೩೩.೩೩ ರಷ್ಟು ಮೀಸಲಾತಿ ನೀಡುವುದನ್ನು 'ಯಾದವದ್ವಯರು' (ಲಾಲುಪ್ರಸಾದ ಯಾದವ್ ಹಾಗೂ ಮುಲಾಯಂಸಿಂಗ್ ಯಾದವ್) ವಿರೋಧಿಸಿದರು. ಅವರ ಹೇಳಿಕೆಯಂತೆ, ಅವರ ಪಕ್ಷದ ಸದಸ್ಯರೆಲ್ಲಾ ವಿರೋಧ ವ್ಯಕ್ತಪಡಿಸಿದರು. ಮಹಿಳೆಯರ ಬಗ್ಗೆ ಶರದ್‌ಯಾದವ್ ಹೊಂದಿದ್ದ ನಿಲುವು ಆಶ್ಚರ್ಯಕರವಾಗಿತ್ತು. ಆ ವೇಳೆಯಲ್ಲಿ ಮಹಿಳೆ ಸಾಮಾಜಿಕ ವ್ಯವಸ್ಥೆಯ ವಿವಿಧ ವಲಯಗಳಲ್ಲಿ ಮಂಚೂಣಿಯಲ್ಲಿದ್ದು ಪ್ರಗತಿ ಸಾಧಿಸಿದ್ದಳು ಆದಾಗ್ಯೂ ಶರತ್‌ಯಾದವ್ ಮಹಿಳೆಯೆಂದರೆ ತುಂಡುಗೂದಲಿನ, ತುಟಿ ಲೇಪನದ ಶೋಕಿ ಮಹಿಳೆಯೆಂದೆ ಪರಿಗಣಿಸಿದ್ದು, ಅವರ ಸಾಮಾನ್ಯ ಜ್ಞಾನಕ್ಕೆ ಹಿಡಿದ ಕನ್ನಡಿ. ಸ್ತ್ರೀ ಪುರುಷರ ಅಧೀನದಲ್ಲಿದ್ದು, ಸದಾ ಭಯಪಡುವ ಸ್ವಭಾವ ಹೊಂದಿರಬೇಕೆಂಬ ಅವರ ಹೇಳಿಕೆಯನ್ನು ಸಾವಿರಾರು ಮಹಿಳೆಯರು ಖಂಡಿಸಿದರು. ಮಹಿಳೆಯರಿಗೆ ಪ್ರತಿಶತ ೩೩ ಮೀಸಲಾತಿ ಏಕೆ ಬೇಕು? ಮೀಸಲಾತಿ ಉದ್ದೇಶವೇನು? ಎಂದು ಪ್ರಶ್ನಿಸಲಾರಂಭಿಸಿದರು. ಭಾರತದಲ್ಲಿನ ಹಲವಾರು ರಾಜಕೀಯ ಪಕ್ಷಗಳ ಕಾರ್ಯಕ್ರಮಗಳು, ವಿಚಾರ ಯೋಜನೆಗಳು ಬೇರೆಯಾಗಿದ್ದರೂ, ಈ ವಿಷಯದಲ್ಲಿ ಪಕ್ಷಭೇದ ಮರೆತು ಒಂದಾದರು. ದೇವೇಗೌಡರು, ಲಾಲುಪ್ರಸಾದ ಯಾದವರವರು 'ಒಳಮೀಸಲಾತಿ' ಬೇಡಿಕೆ ಮಂಡಿಸಿದರು. ಮೀಸಲು ನೀತಿಯ ಲಾಭ ಎಲ್ಲರಿಗೂ ತಲುಪಬೇಕೆಂದರೆ ಕೆನೆಪದರ ನೀತಿಯನ್ನು ಅಳವಡಿಸಲೇಬೇಕೆಂದು ಹೆಚ್.ಡಿ. ದೇವೇಗೌಡರು ಪ್ರತಿಪಾದಿಸಿದ್ದರು (ಒಳಮೀಸಲು ಜಾರಿಗೆ ಹೋರಾಟ. ವಿಜಯಕರ್ನಾಟಕ, ನವೆಂಬರ್ ೮, ೨೦೦೬) ಸಮಾಜದ ಅಂಚಿನಲ್ಲಿರುವ ಹಿಂದುಳಿದ ಜಾತಿ-ಜನಾಂಗದವರಿಗೆ ಮೀಸಲಾತಿ ಅನ್ವಯವಾದರೆ ಸಾಲದು. ಅವುಗಳಿಗೆ ಸಾಮಾಜಿಕ ನ್ಯಾಯ ದೊರಕಬೇಕೆಂದು ಸರ್ಕಾರದ ಮೇಲೆ ಒತ್ತಡ ತರುವುದಾಗಿ ದೇವೇಗೌಡರು ಹೇಳಿದರು. (ಒಳ ಮೀಸಲು – ಜನೇವರಿ ೦೩. ೨೦೦೬)

ಮಹಿಳಾ ಮೀಸಲಾತಿ ಮಸೂದೆ ಜಾರಿಗೆ ಬಂದರೆ ಸಧ್ಯ ಲೋಕಸಭೆಯಲ್ಲಿರುವ ಪುರುಷ ಸಂಸದರ ಸಂಖ್ಯೆಯು ೫೦೦ ರಲ್ಲಿ ೧೮೧ ಸ್ಥಾನಗಳನ್ನು ಮಹಿಳೆಯರು ಪಡೆಯುತ್ತಾರೆ. ಆದ್ದರಿಂದ ಈಗಿರುವ ೧೩೮ ಸಂಸದರು ಅಧಿಕಾರ ತೊರೆಯಬೇಕಾಗುತ್ತದೆ. ಮಹಿಳಾ ಮೀಸಲಾತಿಯಿಂದ ಮಹಿಳೆಯರು ಒಂದು ಸಮೂಹವಾಗಿ ಸಂರಚಿತರಾಗುತ್ತಾರೆ. ತಮಗೆ ಆಗದ ರಾಜಕೀಯ ವ್ಯಕ್ತಿಗಳನ್ನು ಅಥವಾ ಬೇಡದ ಕ್ಷೇತ್ರಗಳನ್ನು ಮಹಿಳಾ ಮೀಸಲು ಕ್ಷೇತ್ರವಾಗಿ ಪರಿವರ್ತಿಸುವ ಸಾಧ್ಯತೆಯಿದೆ ಎಂದು ಮಹಿಳಾವಾದಿಗಳ ವಾದ. (ಮಹಿಳಾ ಮೀಸಲಾತಿಯೊಳಗೆ ಮತ್ತೊಂದು ಮೀಸಲಾತಿ ಬೇಕೆ? ಡಾ.ಗಾಯತ್ರೀ ನಾವಡ, ಉದಯವಾಣಿ, ೧೯.೦೩.೨೦೦೩) ನಮ್ಮ ಸಂವಿಧಾನವು ಮೀಸಲು ನೀಡಿರುವ ಉದ್ದೇಶ ಹಾಗೂ ವ್ಯಾಪ್ತಿಯನ್ನು ಸರಿಯಾಗಿ ಅರ್ಥಮಾಡಿಕೊಂಡರೆ, ಮೀಸಲು ವಿಚಾರದಲ್ಲಿ ವಿನಾಕಾರಣ ಸುಪ್ರಿಂಕೋರ್ಟ್ ತೀರ್ಪನ್ನು ಟೀಕಿಸುವುದು ತಪ್ಪುತ್ತದೆನ್ನುತ್ತಾರೆ ನಿವೃತ್ತ ನ್ಯಾಯಾಧೀಶ ಮಾಜಿ ರಾಜ್ಯಪಾಲ ನ್ಯಾಯಮೂರ್ತಿ. ಎಂ. ರಾಮಾ ಜೋಯಿಸ (ವಿಜಯ ಕರ್ನಾಟಕ, ದಿನಾಂಕ ೨೨.೧೦.೨೦೦೬).

ಇದೆಲ್ಲವನ್ನು ಅವಲೋಕಿಸಿದಾಗ ತಿಳಿಯುವದೇನೆಂದರೆ, ಮಹಿಳಾ ಮೀಸಲಾತಿ ವಿಧೇಯಕವನ್ನು ತಡೆಯಲು ಹೂಡಿರುವ ಸಂಚು ಇದಾಗಿದೆ ಎಂದು ಹೇಳಬಹುದು. ಭಾರತದಲ್ಲಿ ಲಿಂಗ ಸಂಬಂಧವೂ ಜಾತಿ ರೂಪದಿಂದಲೇ ನಿರೂಪಿಸಲ್ಪಡುತ್ತದೆ. ಒಂದೊಂದು ಜಾತಿಯ ಮಹಿಳೆಗೆ ಒಂದೊಂದು ಬಗೆಯ ಹಿಂಸೆಯನ್ನು 'ನೀತಿ'ಯ ಹೆಸರಿನಲ್ಲಿ ಜಾತಿ ಆಧಾರಿತ ಪಿತೃ ಪ್ರಧಾನ ವ್ಯವಸ್ಥೆ ರೂಪಿಸಿದೆ. ಭಾರತೀಯ ಮಹಿಳೆಯರೆಲ್ಲಾ ಶೋಷಿತರೆ, ಆದರೆ ಎಲ್ಲರ ಶೋಷಣೆ, ಅಪಮಾನಗಳು ಒಂದೇ ಆಗಿರುವುದಿಲ್ಲ. ಮೇಲ್ಜಾತಿಯ ಮಹಿಳೆ ಕುಟುಂಬದ ಚೌಕಟ್ಟಿನಲ್ಲಷ್ಟೆ ಶೋಷಿತಳಾದರೆ, ದಲಿತ ಮಹಿಳೆ ಶೋಷಣೆಗೆ ಇಡೀ ಪುರುಷ ಕೇಂದ್ರಿತ ಸಮಾಜ ಪೈಪೋಟಿ ನಡೆಸುತ್ತದೆ. ಹೀಗಾಗಿ ಯಾವುದೇ ನಿರ್ಧಿಷ್ಟ ಮಾನದಂಡದಿಂದ ರೂಪಿಸುವ ಸುಧಾರಣಾ ಕ್ರಮಗಳು, ಕಾನೂನುಗಳು ಒಟ್ಟು ಮಹಿಳಾವರ್ಗದ ಸಮಸ್ಯೆಗಳಿಗೆ ಪರಿಹಾರವಾಗಲಾರವು ಹೀಗೆ ಸಮಾಜದಲ್ಲಿನ ಏಕರೂಪದ ಸಂರಚನೆ. ಸಂಸ್ಕೃತಿಯ ಧ್ಯೇಯ ಆದರ್ಶಗಳು ಮಹಿಳೆಯರನ್ನು ತಲುಪದೇ ಹೋದದ್ದು, ವಿಪರ್ಯಾಸ. ಸರ್ಕಾರದ ದೃಷ್ಟಿಯಲ್ಲಿ ಮಹಿಳೆ 'ವೋಟ್ ಬ್ಯಾಂಕ್' ಮಾತ್ರ. ಮಹಿಳಾ ಆಯೋಗಗಳು ಮಹಿಳಾ ಪರ ಸಂಸ್ಥೆಗಳು, ಎನ್.ಜಿ.ಓ. ಗಳು ಅಧಿಕಾರ ಹಂಚುವಿಕೆಯ ವೈಫಲ್ಯವನ್ನು ಗುರುತಿಸಿ ಹೋರಾಡುತ್ತಿದ್ದರೂ ನಿಗಮ ಮಂಡಳಿಗಳಲ್ಲಿ, ಸರ್ಕಾರದ ಖಾತೆಗಳಲ್ಲಿ ವಿವಿಧ ರೀತಿಯ 'ಲಾಭ' ನಡೆದು ಸ್ವಾರ್ಥಪರ ಚಟುವಟಿಕೆಗಳ ವ್ಯವಹಾರಗಳಾಗಿವೆ ಹೊರತು ಮಹಿಳೆಯರ ಸಬಲೀಕರಣದ ಬಗ್ಗೆ ನಿಜವಾದ ಕಾಳಜಿವಹಿಸುತ್ತಿಲ್ಲ.

ಮಹಿಳಾಪರ ವಿಚಾರಗಳು ಪರಿಹಾರ ಕಾಣಲು ಹಾಗೂ ಮಹಿಳಾ ಸಬಲೀಕರಣದಂತಹ ಯೋಜನೆಗಳು ಅನುಷ್ಠಾನಗೊಳ್ಳಲು ರಾಜಕೀಯ ಸಂಸ್ಥೆಗಳಲ್ಲಿ ಸ್ತ್ರೀಯರ ಪ್ರಾತಿನಿಧ್ಯ ಹೆಚ್ಚಬೇಕು ಮತ್ತು ಸಮರ್ಥ ಪ್ರತಿನಿಧೀಕರಣ ದಾಖಲಾಗಬೇಕು. ಪ್ರತಿಯೊಂದು ರಾಜಕೀಯ ಪಕ್ಷಗಳು ಚುನಾವಣಾ ಪ್ರಣಾಳಿಕೆ ಸಿದ್ಧಪಡಿಸುವ ಆಯೋಗದಲ್ಲಿ ಮಹಿಳೆಯರ ಪ್ರಾತಿನಿಧ್ಯವನ್ನು ಹೆಚ್ಚಿಸಬೇಕು. ಸರ್ಕಾರ ರೂಪಿಸುವ ಅಭಿವೃದ್ಧಿ ಯೋಜನೆಗಳ ಸಮಿತಿಯಲ್ಲಿ ಮಹಿಳೆಯರ ಪಾಲು ಹೆಚ್ಚಾಗಬೇಕು.

## ಅಧ್ಯಯನದ ಉದ್ದೇಶ:

ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆ, ಅಧಿಕಾರ ವಲಯ ಮತ್ತು ಸೇವಾ ವಲಯ ಎಂದು ಎರಡು ರೀತಿಯಲ್ಲಿ ಗುರುತಿಸಲ್ಪಟ್ಟಿದೆ. ಅಧಿಕಾರ ವಲಯದೊಳಗೆ ಮಹಿಳೆಯರಿಗೆ, ಮಹಿಳೆಯರೇ ನಡೆಸಿರುವ ಚಳುವಳಿಯ ಒತ್ತಡದಿಂದಾಗಿ ಅತ್ಯಲ್ಪ ಸ್ಥಾನ ದೊರೆತಿದೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮೇಲ್ವರ್ಗದ ಪುರುಷರು ಎಲ್ಲ ವಲಯಗಳಲ್ಲಿನ ಅಧಿಕಾರವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಕೇವಲ ಬಾಧ್ಯತೆಗಳನ್ನು ಮಾತ್ರ ಮಹಿಳೆಯರ ಪಾಲಿಗೆ ಕಾಯ್ದಿರಿಸಿರುವದರಿಂದ ಮಹಿಳೆ ಆರ್ಥಿಕವಾಗಿ

ದುರ್ಬಲರಾಗಿರುವಳು. ಸ್ತ್ರೀಯರಿಗೆ ವೈಯಕ್ತಿಕ ಆಯ್ಕೆ ಸ್ವಾತಂತ್ರ್ಯವಿಲ್ಲದಂತೆ ಮಾಡಿ, ಕುಟುಂಬದ ಸದಸ್ಯರ ಹೇಳಿಕೆಯಂತೆ, ಅವರಾಯ್ಕೆಯ ಉದ್ಯೋಗವನ್ನು ಮಾಡುವಂತೆ ಅವಳನ್ನು ಒಪ್ಪಿಸಲಾಗುತ್ತಿದೆ. ಸಮಾಜದ ಅಭಿವೃದ್ಧಿಗೆ ಸ್ತ್ರೀ-ಪುರುಷರಿಂದ ರೂಪ ಪಡೆದ, ಚಿಂತನೆ, ಯೋಜನೆಗಳು ಅವಶ್ಯಕ. ಮಹಿಳೆಯ ಬೌದ್ಧಿಕತೆಯನ್ನು ಬಳಸಿಕೊಳ್ಳದೇ, ಕೇವಲ ಅವಳ ದೇಹವನ್ನು ಬಳಸಿಕೊಳ್ಳಲಾಗುತ್ತಿದೆ. ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ರಾಷ್ಟ್ರದ ಅಭಿವೃದ್ಧಿಯೆಂದರೆ ಪುರುಷರ ಅಭಿವೃದ್ಧಿಯಾಗಿದೆ. ಕುಟುಂಬದಿಂದ ಹಿಡಿದು ಸರ್ಕಾರ, ಅರೆಸರ್ಕಾರ ಹಾಗೂ ಖಾಸಗೀ ಕ್ಷೇತ್ರಗಳಲ್ಲಿಯೂ ಸಹ ಮಹಿಳೆಯರನ್ನು ಅತಿ ಹೆಚ್ಚಾಗಿ ಸೇವೆಸಲ್ಲಿಸುವ, ಬುದ್ಧಿವಂತಿಕೆಗೆ ಆಸ್ಪದವಿಲ್ಲದ ಹುದ್ದೆಯಲ್ಲಿರಿಸಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತಿದ್ದಾರೆ.

ದಮನಕ್ಕೆ ಒಳಗಾದ ಮಹಿಳೆ ಪಾಲಿಗೆ ಸಂವಿಧಾನದತ್ತವಾದ ಹಕ್ಕುಗಳು ಔಪಚಾರಿಕ ಹಕ್ಕುಗಳಾಗಿಯೇ ಉಳಿದಿವೆ. ರಾಜಕೀಯ ಕ್ಷೇತ್ರಗಳಲ್ಲಿರುವ ಅಸಮಾನತೆಯನ್ನು ಹೋಗಲಾಡಿಸಲು, ಸರ್ಕಾರದ ನೀತಿ ನಿರೂಪಣೆಯ ಹಂತದಲ್ಲಿ ಆಗಬೇಕಾದ ಮೂಲಭೂತ ಬದಲಾವಣೆಗೆ ದಾರಿಯಾಗಲು ಮಹಿಳೆಯರಿಗಾಗಿಯೇ ವಿಶೇಷ ಸೌಲಭ್ಯ ಕಲ್ಪಿಸಿ ಅವರ ಬದುಕನ್ನು ಉತ್ತಮಗೊಳಿಸುವಿಕೆಯೇ ಮಹಿಳಾ ಮೀಸಲಾತಿ.

ನನ್ನ ಅಧ್ಯಯನದ ಮುಖ್ಯ ಉದ್ದೇಶ ಸಮಾಜದಲ್ಲಿ ಶೋಷಿತರಾದ, ತುಳಿತಕ್ಕೊಳಗಾದ ಮಹಿಳೆಯರಿಂದ ಕಿತ್ತುಕೊಂಡ ಸ್ವಾತಂತ್ರ್ಯ, ಸಮಾನತೆ, ಅಧಿಕಾರ, ಮತ್ತು ಹಕ್ಕುಗಳನ್ನು ಅವರಿಗೆ ಹಿಂತಿರುಗಿಸುವದಾಗಿದೆ. ಅಸಮಾನ ನೆಲೆಯಲ್ಲಿರುವ ದುರ್ಬಲರಿಗೆ ಅಧಿಕಾರ ಕೇಂದ್ರದಲ್ಲಿ ಭಾಗವಹಿಸುವ, ನೀತಿ ನಿರೂಪಣಾ ಪ್ರಕ್ರಿಯೆಯಲ್ಲಿ ನಿರ್ಣಯರಾಗಿಸುವ, ರಾಷ್ಟ್ರದ ಕಾನೂನು ರಚನೆಯ ಭಾಗವಾಗುವ ಅವಕಾಶವನ್ನು ನೀಡುವುದು, ಹಾಗೂ ಪ್ರಭಲರು ಸಾಮಾಜಿಕ ವ್ಯವಸ್ಥೆಯ ಮುಖ್ಯ ವಲಯವಾದ ರಾಜಕೀಯ ಕ್ಷೇತ್ರದಲ್ಲಿನ ಎಲ್ಲ ಅವಕಾಶಗಳನ್ನು ತಾವೇ ದಕ್ಕಿಸಿಕೊಳ್ಳದಂತೆ ಮಾಡುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಮಹಿಳೆಯರು ಆರ್ಥಿಕವಾಗಿ ಪ್ರಭಲಗೊಂಡಾಗ ಮಾತ್ರ ಸಶಕ್ತರಾಗಲು ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ, ಮೇಲ್ವರ್ಗದವರು ಕೆಳವರ್ಗದವರನ್ನು, ಪ್ರಬಲರು ದುರ್ಬಲರನ್ನು, ಪುರುಷರು ಮಹಿಳೆಯರನ್ನು ಹತೋಟಿಯಲ್ಲಿಟ್ಟುಕೊಂಡು ದೈಹಿಕವಾಗಿ ಹಾಗೂ ಮಾನಸಿಕವಾಗಿ ಶೋಷಣೆಗೆ ಗುರಿಪಡಿಸುತ್ತಾರೆ. ತುಳಿತಕ್ಕೊಳಗಾದ ಮಹಿಳೆ ಸಶಕ್ತಳಾಗಬೇಕಾದರೆ, ಅಭಿವೃದ್ಧಿ ಯೋಜನೆಗಳ ಮೂಲಕ ದೊರಯುವ ಸಾಲಸೌಲಭ್ಯಗಳು, ರಿಯಾಯಿತಿಗಳು, ಧನಸಹಾಯ ಮಹಿಳೆಗೂ ದೊರೆಯಬೇಕು. ಸರ್ಕಾರದ ಯೋಜನೆಗಳ ಉಪಯುಕ್ತತೆಯನ್ನು ಪಡೆವ ಮೂಲಕ ಮಹಿಳೆಯಲ್ಲಿ ಆತ್ಮಸ್ಥೈರ್ಯ ಹೆಚ್ಚುತ್ತದೆ. ಕಾನೂನಿನ ಮೂಲಕ ರಾಜಕೀಯ ರಂಗದಲ್ಲಿ ಪ್ರವೇಶಿಸಿ, ಹಕ್ಕು

ಸ್ವಾತಂತ್ರ್ಯಗಳನ್ನು ಪಡೆದಾಗ ಮಾತ್ರ ಮಹಿಳೆ ಸಮಾಜದ ಸಮಗ್ರ ಅಭಿವೃದ್ಧಿಗೆ ತನ್ನ ಕೊಡುಗೆಯನ್ನು ನೀಡುತ್ತಾಳೆ.

**<u>ಅಧ್ಯಯನದ ವ್ಯಾಪ್ತಿ:</u>**

ಪ್ರಸ್ತುತ ಅಧ್ಯಯನವು ಹೈದರಾಬಾದ್-ಕರ್ನಾಟಕ ಹಿಂದುಳಿದ ಭಾಗವಾಗಿ ಪರಿಗಣಿಸಲ್ಪಟ್ಟ ಕೊಪ್ಪಳ ಜಿಲ್ಲೆಯ ಕುಷ್ಟಗಿ ಹಾಗೂ ಯಲಬುರ್ಗ ತಾಲ್ಲೂಕಿನ ಗ್ರಾಮಪಂಚಾಯತಿಗಳಿಗೆ ಸೀಮಿತಗೊಂಡಿದೆ. ಬೌಗೋಳಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ಈ ಪ್ರದೇಶಗಳಲ್ಲಿ ಮಹಿಳಾ ಮೀಸಲಾತಿ ಮುಖಾಂತರ ಚುನಾಯಿತರಾದ ಮಹಿಳೆಯರ ಸ್ಥಿತಿಗತಿಗಳಲ್ಲಿ, ಸ್ಥಾನಮಾನಗಳಲ್ಲಿ ಬದಲಾವಣೆ ಸಾಧ್ಯವಾಗಿದೆಯಾ ಎಂಬುದನ್ನು ಪರಿಶೀಲಿಸುವುದಕ್ಕಾಗಿ ಕ್ಷೇತ್ರ ಕಾರ್ಯ ಅಧ್ಯಯನ ಮಾಡಲಾಗಿದೆ.

ವ್ಯವಸಾಯವನ್ನೇ ಮುಖ್ಯ ಉದ್ಯೋಗವಾಗಿರುವ ಈ ಕ್ಷೇತ್ರಗಳಲ್ಲಿ ಶ್ರೇಣಿಕರಣ ತಾರತಮ್ಯ ಈಗಲೂ ಅಲ್ಲಲ್ಲದೆ. ಕಂದಕೂರಿನ ಗ್ರಾಮಪಂಚಾಯತಿಯ ಅಧ್ಯಕ್ಷರಾದ ದೇವಮ್ಮ, ಹಿಂದುಳಿದ ಜಾತಿಯವರು. ಅಕ್ಷರ ಜ್ಞಾನವಿಲ್ಲದೇ ತಮ್ಮ ಅಧಿಕಾರವನ್ನು ಸಮರ್ಥವಾಗಿ ನಿಭಾಯಿಸಿಕೊಂಡು ಹೋಗುತ್ತಿರುವರು. ಗ್ರಾಮದ ಮುಖಂಡ ಅಥವಾ ಧರ್ಮ ಮುಖಂಡರು ತಮ್ಮ ಹಿತಾಸಕ್ತಿಗಳಿಗೆ ಪೂರಕವಾಗಿ ನಡೆಯುವಂತಹ ಮಹಿಳೆಯನ್ನು ಮೀಸಲು ಕ್ಷೇತ್ರಕ್ಕೆ ಆಯ್ಕೆ ಮಾಡುತ್ತಾರೆ. ಇವರಲ್ಲಿ ಬಹುತೇಕರು ತಳಸಮುದಾಯಕ್ಕೆ ಸೇರಿದ ಮಹಿಳೆಯರೇ ಅಗಿರುತ್ತಾರೆ. ಈ ಬಗೆಯ ಪ್ರಬಲ ಜಾತಿಗಳು ನಡೆಸುವ ಯಜಮಾನಿಕೆಯನ್ನು ಒಪ್ಪುವಂತೆ ಅವಳನ್ನು ಕೌಟುಂಬಿಕ ಹಾಗೂ ಧರ್ಮದ ನೆಲೆಯಿಂದ ಬಂಧಿಸಲಾಗಿರುತ್ತದೆ. ಗ್ರಾಮದಲ್ಲಿ ಸಂಪನ್ಮೂಲದ ಉತ್ಪಾದನೆಯಲ್ಲಿ ಶೇಕಡ ೬೦ ರಷ್ಟು ಶ್ರಮ ಮಹಿಳೆಯರದಾಗಿರುತ್ತದಾದರೂ, ಅಧಿಕಾರ ಹಂಚಿಕೆಯಲ್ಲಿ ಶೇಕಡ ೬ ನ್ನೂ ದಾಟುವುದಿಲ್ಲ. ಮೀಸಲು ಕ್ಷೇತ್ರದಲ್ಲಿ ಮಾತ್ರ ಮಹಿಳೆಯನ್ನು ಅಭ್ಯರ್ಥಿಯನ್ನಾಗಿರಿಸಿ, ಉಳಿದ ಸ್ಥಾನಗಳಲ್ಲಿ ಪ್ರಬಲ ವರ್ಗ ಅಥವಾ ಪ್ರಬಲ ಪುರುಷ ಅಧಿಕಾರದಲ್ಲಿರುತ್ತಾರೆ. ಪ್ರಬಲ ವರ್ಗಗಳ ವಿರುದ್ಧ ಆಯ್ಕೆಯಾದ ಮಹಿಳೆಗೆ ಯೋಜನೆಗಳ ಬಗ್ಗೆ ಸರಿಯಾದ ಮಾಹಿತಿಯನ್ನು ನೀಡಲಾಗುವುದಿಲ್ಲ.

**<u>ವೈಧಾನಿಕತೆ:</u>**

ಗ್ರಾಮಪಂಚಾಯತಿಯಲ್ಲಿ ಮಹಿಳಾ ಮೀಸಲಾತಿ ಎಂಬ ಈ ಪ್ರಬಂಧದ ಅಧ್ಯಯನವನ್ನು 'ಸ್ತ್ರೀ'ವಾದಿ ಸಂಶೋಧನಾ ವಿಧಾನದಿಂದ ಅಳವಡಿಸಲಾಗಿದೆ. ಅಧ್ಯಯನ ಮಾಡಲು ಪ್ರಶ್ನಾವಳಿ ಹಾಗೂ ಗುಣಾತ್ಮಕ ವಿಧಾನ, ವ್ಯಕ್ತಿನಿಷ್ಠ ವಿಧಾನ, ಸಂದರ್ಶನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಗ್ರಾಮ

ಪಂಚಾಯತಿಯ ಚುನಾಯಿತ ಪುರುಷ ಸದಸ್ಯರನ್ನು, ಕಾರ್ಯದರ್ಶಿಯನ್ನು ಕೂಡ ಸಂದರ್ಶಿಸಿ ಅಗತ್ಯವಾದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

ಇದರೊಂದಿಗೆ ಗ್ರಂಥಾಲಯದಲ್ಲಿನ ವಿವಿಧ ಗ್ರಂಥ, ಪ್ರಬಂಧ, ವೃತ್ತ ಪತ್ರಿಕೆ, ನಿಯತಕಾಲಿಕೆಗಳ ಮೂಲಕ ಮಾಹಿತಿ ಪಡೆಯಲಾಗಿದೆ.

**ಅಧ್ಯಯನದ ಸ್ವರೂಪ:**

ಗ್ರಾಮಪಂಚಾಯತಿಯಲ್ಲಿ ಮಹಿಳಾ ಮೀಸಲಾತಿ ಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರಸ್ತಾವನೆಯಲ್ಲಿ ಅಧ್ಯಾಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಹಾಗೂ ವೈಧಾನಿಕತೆಯನ್ನು ವಿವರಿಸಲಾಗಿದೆ.

ಅಧ್ಯಾಯ ಒಂದು : ಈ ಅಧ್ಯಾಯದಲ್ಲಿ ಮಹಿಳಾ ಸಬಲೀಕರಣದ ಬಗ್ಗೆ ಸ್ಥೂಲ ಚಿತ್ರಣವನ್ನು ಕೊಡಲಾಗಿದೆ. ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರದಲ್ಲಿ ಮಹಿಳೆಯರ ಸಾಮಾಜಿಕ ಬದಲಾವಣೆಗೆ ಮಾಡಲಾದ ಅಭಿವೃದ್ಧಿ ಕಾರ್ಯಗಳಾವುವು. ಮಹಿಳೆ ಸಬಲಳಾಗಲು ಮಹಿಳಾ ಸಶಕ್ತೀಕರಣದ ಪರಿಕಲ್ಪನೆ ಯಾವ ಕ್ಷೇತ್ರದಿಂದ ಆರಂಭವಾಗಬೇಕೆಂಬುದನ್ನು ವಿವರಿಸಲಾಗಿದೆ.

ಅಧ್ಯಾಯ ಎರಡು : ಮಹಿಳಾ ಸಬಲೀಕರಣ ಹಾಗೂ ರಾಜಕೀಯ ಸಬಲೀಕರಣಗಳು ಪರಸ್ಪರ ಹೇಗೆ ಅವಲಂಬಿತವಾಗಿವೆಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮಹಿಳೆ ತನ್ನದಾದ ಹಕ್ಕುಗಳನ್ನು ಪಡೆಯಲು ಮಾಡಿದ ಹೋರಾಟಗಳನ್ನು ಮಹಿಳಾ ಚಳುವಳಿಯ ಮೂಲಕ ವಿವರಿಸಲಾಗಿದೆ.

ಅಧ್ಯಾಯ ಮೂರು : ಮಹಿಳೆಯರ ರಾಜಕೀಯ ಭಾಗವಹಿಸುವಿಕೆಗೆ ತಳಹದಿಯಾದ ಸ್ಥಳೀಯ ಸರ್ಕಾರದ ಉಗಮ, ಉದ್ದೇಶ, ಮಹತ್ವವನ್ನು ತಿಳಿಸುತ್ತ, ಗ್ರಾಮಪಂಚಾಯತಿಯಲ್ಲಿ ಮಹಿಳೆಗೆ 'ಮೀಸಲಾತಿ' ಮೂಲಕ ನೀಡಲಾದ ಹಕ್ಕು-ಕರ್ತವ್ಯಗಳಾವುವು? ಸಮಾನತೆಯೆಡೆಗೆ ಮಹಿಳೆ ಸಾಗುತ್ತಿರುವಳಾ? ಎಂಬ ವಿಷಯಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕು : ಸಮಾಜದ ತಳಸಮುದಾಯದ ಮೂಲಭೂತ ಸೌಲಭ್ಯಗಳಿಂದ ವಂಚಿತರಾದ, ಅಂಚಿನಲ್ಲಿರುವ ಹಿಂದುಳಿದ ವರ್ಗ, ಪಂಗಡಗಳ ಮಹಿಳೆಗೆ ನೀಡಲಾಗಿರುವ 'ಮಹಿಳಾ ಮೀಸಲಾತಿ' ತಲುಪಿವೆಯೇ? ಗ್ರಾಮಪಂಚಾಯತಿಯಲ್ಲಿ ಅಧಿಕಾರ ಅವಳ ಕಾರ್ಯನಿರ್ವಹಣೆಗೆ ಪೂರಕವಾಗಿದೆಯೇ ಎಂಬ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಐದು : ಈ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯ ಕುಷ್ಟಗಿ ಹಾಗೂ ಯಲಬುರ್ಗ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಪಂಚಾಯತಿಗಳನ್ನು ಆಯ್ಕೆಮಾಡಿ ಕ್ಷೇತ್ರಕಾರ್ಯ ಮಾಡಲಾಗಿದೆ. ಕ್ಷೇತ್ರಕಾರ್ಯಗಳ ಮೂಲಕ ಗ್ರಾಮಪಂಚಾಯಿತಿಯಲ್ಲಿ ಮೀಸಲು ಕ್ಷೇತ್ರದ ಮಹಿಳೆಯ ಅಧಿಕಾರ ನಿರ್ವಹಣೆ ಹಾಗೂ ಅನಗತ್ಯವಾಗಿ ನಿರ್ಮಾಣವಾಗುತ್ತಿರುವ ಹಸ್ತಕ್ಷೇಪ, ಈ ಎಲ್ಲರ ಮಧ್ಯೆಯೂ ಮಹಿಳಾ ಮೀಸಲಾತಿಯನ್ನು ತನ್ನ ಹಾಗೂ ತನ್ನಂತಿರುವ ವಿವಿಧ ಸಮುದಾಯಗಳ ಮಹಿಳೆಯರ ಸಬಲೀಕರಣದ ಸಾಧ್ಯತೆ ಬಗ್ಗೆ ವಿವರಿಸಲಾಗಿದೆ.

ಅಧ್ಯಾಯ ಆರು : ಗ್ರಾಮಪಂಚಾಯತಿಯ ಮೀಸಲು ಕ್ಷೇತ್ರದ ಮಹಿಳೆಯರ ಪ್ರಕರಣಗಳ ಫಲಿತಾಂಶ ಹಾಗೂ ಅಧ್ಯಯನದ ಫಲಿತಾಂಶ ನೀಡಲಾಗಿದೆ. ಪಂಚಾಯತಿಯಲ್ಲಿ ಮೂಲ ಸೌಕರ್ಯಗಳ ಕೊರತೆ, ಅವುಗಳ ನಿವಾರಣೆ, ಸರ್ಕಾರ ಕೈಗೊಂಡ ಕ್ರಮಗಳು, ಯೋಜನೆಗಳು, ಅವುಗಳು ಎಷ್ಟರಮಟ್ಟಿಗೆ ಕಾರ್ಯಗತವಾಗಿವೆ ಎಂಬುದನ್ನು ಚರ್ಚಿಸಲಾಗಿದೆ. ಗ್ರಾಮಪಂಚಾಯತಿಗಳಿಗಿರುವ ಅಧಿಕಾರ ಇಲ್ಲಿನ ಸದಸ್ಯೆಯರ ಸಬಲೀಕರಣಕ್ಕೆ, ಅಧ್ಯಕ್ಷೆಯರ ಸಬಲೀಕರಣಕ್ಕೆ, ಹಾಗೂ ಮಹಿಳಾ ಸಮುದಾಯದ ಪೂರ್ಣಪ್ರಮಾಣದ ಸಬಲೀಕರಣಕ್ಕೆ ಏಕೆ ಸಾಧ್ಯವಾಗಿಲ್ಲ, ಗ್ರಾಮಪಂಚಾಯತಿಗಳಿಗೆ ಅಧಿಕಾರದ ಚೌಕಟ್ಟನ್ನು ವಿಸ್ತರಿಸಬೇಕು ಹಾಗೂ ಗ್ರಾಮ ಪಂಚಾಯತಿಯಲ್ಲಿನ ಮಹಿಳಾ ಮೀಸಲಾತಿ ರಾಜ್ಯಗಳಲ್ಲಿನ ವಿಧಾನ ಸಭೆಗೆ, ರಾಷ್ಟ್ರೀಯ ಲೋಕಸಭೆಗೆ ವಿಸ್ತರಿಸುವದರಿಂದ ಮಹಿಳಾ ಅಭಿವೃದ್ಧಿಯೊಂದಿಗೆ ದೇಶದ ಅಭಿವೃದ್ಧಿ ಹೇಗೆ ಸಾಧ್ಯವಾಗುತ್ತದೆ ಎನ್ನುವುದರ ಬಗ್ಗೆ ಚರ್ಚಿಸಲಾಗಿದೆ.

ಭಾರತ ದೇಶವು ಜಗತ್ತಿನಲ್ಲಿಯೇ ತುಂಬಾ ಪ್ರಬುದ್ಧವಾದ, ಜೀವಂತಿಕೆಯಿಂದ ತುಡಿಯುವ ಪ್ರಜಾಪ್ರಭುತ್ವವೆಂದು ಪರಿಗಣಿಸಲಾಗುತ್ತದೆ. ಸ್ವತಂತ್ರ ಭಾರತದ ಮೂಲಭೂತ ಕಾನೂನು ಎಂದಿನಿಸಿದ ಭಾರತದ ಸಂವಿಧಾನ ಪ್ರಜೆಗಳಲ್ಲಿ ಲಿಂಗ ತಾರತಮ್ಯ ತೋರದೆ, ಸಮಾನ ಸ್ಥಾನಮಾನ, ಅವಕಾಶ ಹಾಗೂ ಹಕ್ಕುಗಳನ್ನು ನೀಡಿದೆ. ಆದರೆ ಭಾರತದಲ್ಲಿನ ಪುರುಷ ಪ್ರಧಾನ, ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ ಅಸ್ತಿತ್ವರಹಿತಳಾಗಿರುವಳು. ಪುರುಷನಿಗಿಂತ ಮಹಿಳೆ ದುರ್ಬಲಳು ಎಂಬ ಪುರುಷ ಕಲ್ಪಿತ ನೀತಿ ಕುಟುಂಬದದಿಂದ ಹಿಡಿದು ಸಮಾಜದ ವಿವಿಧ ಸ್ತರಗಳಲ್ಲಿ ಬೆಸೆದುಕೊಂಡಿದೆ.

ಸಬಲೀಕರಣ ಎಂಬ ಪದವನ್ನು ಆಂಗ್ಲ ಪದವಾದ 'Empowerment' ಗೆ ಸಮಾನಾರ್ಥಕವಾಗಿ ಬಳಸಲಾಗುತ್ತದೆ. ಇದರರ್ಥ ಶಕ್ತಿ ಕೊಡು, ಅಧಿಕಾರ ವಹಿಸು, ಅರ್ಹತೆ, ಸಮರ್ಥತೆ, ಹಾಗೂ ಕಾನೂನಿನ ಹಕ್ಕುಗಳನ್ನು ನೀಡುವುದಾಗಿದೆ. ವ್ಯಕ್ತಿಯನ್ನು ಸಶಕ್ತಗೊಳಿಸುವ ಕ್ರಿಯೆಯೇ ಸಬಲೀಕರಣ.[೧] ಇದು 'ಶಕ್ತಿ' ಎಂಬ ಮೂಲ ಕಲ್ಪನೆಯನ್ನು ಹೊಂದಿದೆ. ಆ ಶಕ್ತಿ ಆರ್ಥಿಕ, ಸಾಮಾಜಿಕ ಹಾಗು ರಾಜಕೀಯ ಶಕ್ತಿಯಾಗಿದೆ. ಮಹಿಳೆ ತನ್ನ ಆಯ್ಕೆ ಹಕ್ಕನ್ನು ಪಡೆವ, ತಮ್ಮ ಜೀವನದ ಮೇಲೆ ತಾವೇ ನಿಯಂತ್ರಣ ಹೊಂದಿರುವ, ತಮ್ಮ ಕಾರ್ಯಸೂಚಿಗಳನ್ನು ತಾವೇ ರೂಪಿಸಿ, ಕಾರ್ಯರೂಪಕ್ಕೆ ತರುವ, ಸಂಪನ್ಮೂಲಗಳ ಮೇಲೆ ಹಿಡಿತ ಸಾಧಿಸುವ ಪ್ರಕ್ರಿಯೆಯೇ ಮಹಿಳಾ ಸಬಲೀಕರಣವಾಗಿದೆ. ಮಹಿಳೆಯ ರಾಜಕೀಯ ಭಾಗವಹಿಸುವಿಕೆ, ಅಧಿಕಾರಯುತವಾದ ನೀತಿ ನಿರೂಪಣೆಯಲ್ಲಿ ಸಕ್ರಿಯ ಭಾಗವಹಿಸುವಿಕೆ, ನಿಯಮಗಳನ್ನು ಕಾರ್ಯರೂಪಕ್ಕೆ ತರುವ, ನಿಯಮ ಉಲ್ಲಂಘಿಸಿದವರನ್ನು ಶಿಕ್ಷಿಸುವ ಅಧಿಕಾರ ಪಡೆದಾಗ ಮಾತ್ರ ಅವಳು ಸಾಮಾಜಿಕವಾಗಿ ಸಬಲಳಾಗುವಳು.[೨] ಈ ರೀತಿಯ ಅಧಿಕಾರ ಕೇಂದ್ರದಲ್ಲಿ ಭಾಗವಹಿಸುವಿಕೆ ಅವಳ ಸ್ಥಾನಮಾನ, ಗೌರವವನ್ನು ಹೆಚ್ಚಿಸುತ್ತದೆ. ಪುರುಷ ಕೇಂದ್ರಿತ ಸಮಾಜದ ಮೌಲ್ಯಗಳು ಪುರಷರ ಪರವಾಗಿರವವು.

ಸ್ತ್ರೀ-ಪುರುಷರ ನಡುವಿನ ಸಾಮಾಜಿಕ ಭಿನ್ನತೆಯಿಂದ ಕುಟುಂಬ ರೂಪಗೊಂಡಿತು. ನಾಗರಿಕತೆ ಪ್ರಾರಂಭವಾದಾಗಿನಿಂದ, ಕುಟುಂಬ, ಸಮಾಜ ರಚನೆಯಾಗುವ ಪೂರ್ವದಲ್ಲಿ ಸ್ತ್ರೀ-ಪುರುಷರು ಕೂಡಿಕೊಂಡೆ ಗುಡ್ಡ-ಬೆಟ್ಟಗಳಲ್ಲಿ ಪ್ರಾಣಿ ಬೇಟೆಯಾಡುತ್ತಾ, ತಮ್ಮ ದಿನನಿತ್ಯದ ಆಹಾರ ಹುಡುಕಿಕೊಳ್ಳುತ್ತಿದ್ದರು. ಮುಂದೆ ಮಾನವ ಜನಾಂಗ ನದಿ ತೀರದಲ್ಲಿ ವಾಸಿಸುತ್ತಾ, ತಮ್ಮ

ಸುತ್ತಮುತ್ತಲಿರುವ ಫಲವತ್ತಾದ ಭೂಮಿಯಲ್ಲಿ ಮಹಿಳೆಯರೇ ದವಸ-ಧಾನ್ಯ ಬಿತ್ತಲಾರಂಭಿಸಿದರು. ಹೀಗೆ ಮಹಿಳೆಯರು ಆಹಾರ ಧಾನ್ಯ ಬೆಳೆದರೆ, ಪುರುಷರು ಅರಣ್ಯದಲ್ಲಿರುವ ಪ್ರಾಣಿ ಬೇಟೆಯಾಡಿ ಮನೆಗೆ ತಂದಾಗ ಅದನ್ನು ಆಹಾರವಾಗಿ ತಯಾರು ಮಾಡುವ ಕಾರ್ಯ ಮಹಿಳೆಯರದಾಯಿತು.[೩] ನಾಗರಿಕತೆ ಬೆಳೆದಂತೆ ಮಹಿಳೆಯ ದುಡಿಮೆ ಶ್ರಮದಾಯಕವಾಗಿದ್ದರೂ ಮಹಿಳೆಯ ದುಡಿಮೆ ಆದಾಯ ಉತ್ಪದನಾ ವರ್ಗಕ್ಕೆ ಸೇರಲಿಲ್ಲ. ಅದಕ್ಕೆ ಮನ್ನಣೆ ದೊರೆತಿರಲಿಲ್ಲ. ಕೃಷಿ ಆದಾಯ ಆಧಾರಿತ ಉತ್ಪಾದನೆ ಪುರುಷ ನಿರ್ಮಿತ ಉತ್ಪಾದನೆಯಾಗಿ ಪುರುಷನಲ್ಲಿ ಕೇಂದ್ರಿಕೃತವಾಗಿತ್ತು. ಆಗ ಸ್ತ್ರೀ-ಪುರುಷರ ಜೈವಿಕ ಭಿನ್ನತೆಯನ್ನೇ ಆಧಾರವಾಗಿಟ್ಟುಕೊಂಡ ಲಿಂಗಾಧಾರಿತ ತಾರತಮ್ಯಗಳು ಸೃಷ್ಟಿಯಾದವು. ಸಮಾಜದ ಕಟ್ಟುಪಾಡುಗಳು, ಧಾರ್ಮಿಕ ಆಚರಣೆಗಳು ಹಾಗೂ ಸಂಪ್ರದಾಯಗಳು ಮಹಿಳೆಗೆ ಸೀಮಿತವಾಗಿ ವ್ಯವಸ್ಥಿತವಾಗಿ ಅದರೊಳಗೆ ಮಹಿಳೆ ಬಂಧಿತಳಾದಳು. ಅಲ್ಲಿಂದಾಚೆಗೆ ಕಾರ್ಯ ಚಟುವಟಿಕೆಗಳು, ಪುರುಷ ನಿಯಂತ್ರಿತವಾದವು. ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ಅಧಿಕಾರ ಕೇಂದ್ರಿಕರಣ ಪ್ರಧಾನವಾಗಿರಿಸುವಲ್ಲಿ ಪುರುಷ ಸೃಷ್ಟಿತ ಶಾಸ್ತ್ರಗಳು, ಧರ್ಮ ಗ್ರಂಥಗಳು ಸಹಾಯಕವಾದವು. ಸಾರ್ವಜನಿಕ ಜೀವನದಲ್ಲಿ ಸ್ತ್ರೀಗೆ ಭಾಗವಹಿಸುವ ಮುಕ್ತ ಅವಕಾಶವನ್ನು ಕಸಿದುಕೊಳ್ಳಲಾಯಿತು. ಕುಟುಂಬದಲ್ಲಿ ಮಹಿಳೆಯನ್ನು ಬಂಧಿಸಿ, ಕುಟುಂಬದ ಹೊರಗಿನ ಚಟುವಟಿಕೆಗಳಿಗೆ ಪುರುಷ ಯಜಮಾನನಾದ. ಹೀಗೆ ಪುರುಷನನ್ನು ಪ್ರಧಾನವಾಗಿರಿಸುತ್ತಾ, ಸ್ತ್ರೀಯನ್ನು ಅಪ್ರಧಾನವಾಗಿಸುವ ವ್ಯವಸ್ಥೆ ರಚಿತವಾಯಿತು.[೪]

ಸಮಾಜದ ಎಲ್ಲಾ ವರ್ಗಗಳಲ್ಲಿ, ವಲಯಗಳಲ್ಲಿ ಪುರುಷರು ಪ್ರಧಾನರಾಗಿ ಆಡಳಿತ, ಅಧಿಕಾರ ಮತ್ತು ಹಕ್ಕುಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಕೇವಲ ಬಾಧ್ಯತೆಗಳನ್ನು ಅವಳ ಪಾಲಿಗಿರಿಸಿ, ಅವಳನ್ನು ಶೋಷಿಸುತ್ತಾ, ಕೀಳಾಗಿಸುತ್ತ ನಡೆದರು. ಸ್ತ್ರೀಯನ್ನು ಆರ್ಥಿಕವಾಗಿ ದುರ್ಬಲಳಾಗಿಸಿ, ಅವಳ ಸ್ವಾತಂತ್ರ, ಹಕ್ಕುಗಳನ್ನು ಕಿತ್ತುಕೊಂಡು, ಅವಳಿಗೆ ಸಾಮರ್ಥ್ಯ ಇಲ್ಲ ಎಂದು ಪೂರ್ವಪೀಡಿತವಾಗಿ ಗ್ರಹಿಸಿ ಅಸಮಾನ ನೆಲೆಯಿಂದ ಅಸಮಾನ ಸಾಮಾಜ ರೂಪಿಸಿದರು.[೫] ವಿವಾಹ ಸಂಸ್ಥೆ ಮೇಲು ನೋಟಕ್ಕೆ ಮಹಿಳೆಗೆ ಭದ್ರತೆ ನೀಡುವ ಹಾಗೆ ಕಾಣಿಸಿದರೂ, ಅಂತರಂಗದಲ್ಲಿ ಮನೆಯವರಿಂದ ನಿರ್ಲಕ್ಷಿಸಲ್ಪಡುವ, ದಮನಕ್ಕೆ ಒಳಗಾಗುವ, ಪರಕೀಯಳಾಗುಳಿಯುವಂತಾಯಿತು.

ಸ್ತ್ರೀಯು ಯಾವುದೇ ಕಾರಣಕ್ಕೂ ಅಧಿಕಾರ, ರಾಜಕಾರಣದಂತಹ ವಿಚಾರಗಳಲ್ಲಿ ಅರ್ಹಳಾಗಲಾರಳೆಂಬುದೇ ಪುರುಷ ಪ್ರಧಾನ ವ್ಯವಸ್ಥೆಯ ಗ್ರಹಿಕೆಯಾಗಿತ್ತು. ಹೀಗಾಗಿ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಮಹಿಳೆಗೆ ಮುಕ್ತ ಅವಕಾಶ ನಿರಾಕರಿಸುತ್ತ ಸಾರ್ವಜನಿಕ ಕ್ಷೇತ್ರಗಳಲ್ಲಿ, ನೀತಿ ನಿರ್ಧಾರದ ರೂಪಿಕೆಯಲ್ಲಿ ಸ್ತ್ರೀಯರನ್ನು ಅಲಕ್ಷಿಸಿದ್ದರು. ಉನ್ನತ ವರ್ಗಗಳ ಕುಟುಂಬಗಳ ಹೆಣ್ಣುಮಕ್ಕಳಿಗೆ ಶಿಕ್ಷಣ ಕಲಿಸುವ ಉದ್ದೇಶವಿತ್ತಾದರೂ ಅದನ್ನು ಮನೆಯಲ್ಲೆ ಕಲಿಸಬೇಕಾಗಿತ್ತು. ಸಾರ್ವಜನಿಕವಾಗಿ

ಬರೆಯುವುದನ್ನು, ಶಾಲೆಗೆ ಹೋಗುವುದನ್ನು ನಿಷೇಧಿಸಲಾಗಿತ್ತು. ಆದರೆ ಕಾಲಕ್ರಮೇಣ ವಸಾಹತುಶಾಹಿ ಆಡಳಿತದ ಪರಿಣಾಮವಾಗಿ ಅನೇಕ ಭಾರತೀಯ ಚಿಂತಕರು, ಲೇಖಕರು, ಸಮಾಜ ಸುಧಾರಕರು ಮಹಿಳೆಯರಿಗಿರುವ ಶಿಕ್ಷಣದ ಅವಶ್ಯಕತೆಗಳನ್ನು ತಿಳಿಸತೊಡಗಿದರು. ಶಿಕ್ಷಣ ದೊರೆತ ಮಹಿಳೆ ತನ್ನ ಕುಟುಂಬ, ಮನೆ, ಮಕ್ಕಳನ್ನು ಉತ್ತಮವಾಗಿ ನಿಭಾಯಿಸುತ್ತಾಳೆ ಎಂಬ ವಿಶ್ವಾಸ ಮಾಡತೊಡಗಿತು. ಶಿಕ್ಷಣ ಮಹಿಳೆಗೂ ಅವಶ್ಯಕ ಎಂಬುದನ್ನು, ಅದರ ಅಗತ್ಯತೆಯನ್ನು ಗುರುತಿಸುವ ನಿಟ್ಟಿನಲ್ಲಿ ಮಹಿಳಾಪರ ಆಲೋಚನೆಗಳು ಪ್ರಾರಂಭವಾದರು. ಶಿಕ್ಷಣ ಪಡೆದ ಮಹಿಳೆಯರು ಸಾರ್ವಜನಿಕ ಸಮಸ್ಯೆಗಳಿಗೆ ಸ್ಪಂದಿಸತೊಡಗಿದರು. ಈ ನಿಟ್ಟಿನಲ್ಲಿ ಯೋಚಿಸುವಂತೆ ಮಹಿಳೆಯರಲ್ಲಿ ಮನದಟ್ಟು ಮಾಡಿಕೊಡಲಾರಂಭಿಸಿದರು.

೧೯೬೦ ರ ದಶಕದಲ್ಲಿ ಮಹಿಳಾಪರ ಚಿಂತಕರು, ಸ್ತ್ರೀವಾದಿಗಳು ರಚಿತವಾದ ಪುರುಷ ಪ್ರಧಾನ ವ್ಯವಸ್ಥೆಯ ನೀತಿಗಳನ್ನು ಪ್ರಶ್ನಿಸುವ, ಬದಲಿಸುವ ಕಾರ್ಯವನ್ನು ಮಾಡಹತ್ತಿದರು.[೬] ಸ್ತ್ರೀಯರ ಬಗೆಗಿರುವ ಪೂರ್ವಗ್ರಹ ಪೀಡಿತ ಚಿಂತನೆ, ಮಾತೃವಾತ್ಸಲ್ಯ ಎಂಬ ಭಾವಾಂಶವನ್ನು ವೈಭವೀಕರಿಸುತ್ತಾ, ಮಹಿಳೆಯನ್ನು ಕುಟುಂಬ, ವಿವಾಹ, ಸಂತಾನ ಎಂಬ ಸೀಮಾರೇಖೆಯಿಂದ ಅವಳನ್ನು ಕನಿಷ್ಠವಾಗಿರಿಸಿದ ರೀತಿಯನ್ನು ಖಂಡಿಸಿದರು. ಮಹಿಳೆಯ ದೇಹ, ಬುದ್ಧಿ, ಮನಸ್ಸುಗಳ ಮೇಲೆ ನಿಯಂತ್ರಣ ಸಾಧಿಸುವ ಪುರುಷರ ಅಪಕ್ವ ಚಿಂತನೆಯನ್ನು ವಿರೋಧಿಸಿದರು. ರೂಢಿ, ಸಂಪ್ರದಾಯಗಳೆಂಬ ಅವೈಚಾರಿಕತನದಿಂದ ಮಹಿಳೆಯರ ಸ್ವ-ಇಚ್ಛೆ, ವೈಯಕ್ತಿಕ ಅರ್ಹತೆ, ಕೌಶಲ್ಯ, ಆಸಕ್ತಿಗಳನ್ನು ಹತ್ತಿಕ್ಕಿ, ಕುಟುಂಬದಲ್ಲಿ ಸ್ತ್ರೀ ಗಂಡನನ್ನು ತೃಪ್ತಿಪಡಿಸುವವಳಾಗಿ ಪ್ರತಿನಿಧಿಸಲ್ಪಟ್ಟ ಪುರುಷ ವ್ಯವಸ್ಥೆಯನ್ನು ವಿರೋಧಿಸಿದರು. ವಿವಾಹದ ನಿಯಮಗಳು ಸ್ತ್ರೀಗೆ ಮಾತ್ರವೇ? ವಿವಾಹ ನಿಯಮಗಳನ್ನು ಪಾಲಿಸದ ಪುರುಷನ್ಯಾಕೆ ಕೆಟ್ಟ ಗಂಡ, ಕೆಟ್ಟ ತಂದೆಯಾಗಿ ಪ್ರತಿನಿಧಿಸಲ್ಪಡುವುದಿಲ್ಲ? ಹೆಣ್ಣಿನ ನಿರಂತರ ಶೋಷಣೆಗೆ ಕಾರಣನಾದ ಪುರುಷನನ್ನು ಯಾಕೆ ಸಮಾಜದ ಗೌರವಾನ್ವಿತನಾಗಿ ಗುರುತಿಸಬೇಕು? ಎಂಬುದನ್ನು ಪ್ರಶ್ನಿಸಹತ್ತಿದರು.

ಕುಟುಂಬದ ವ್ಯವಸ್ಥೆಯ ಮೂಲ ಕೇಂದ್ರಿತವಾದ ಪುರುಷರ ಸಂಬಂಧಗಳನ್ನು ಬಹಿಷ್ಕರಿಸಿ, ಅವುಗಳಿಂದ ಹೊರಬಂದು, ಅವುಗಳಿಂದ ದೂರವಾಗುಳಿದರು. ಪುರುಷ ಸ್ವಾಮ್ಯದಿಂದ ತಮ್ಮನ್ನು ರಕ್ಷಿಸಿಕೊಂಡು, ತಮ್ಮ ಶರೀರಗಳ ಮೇಲೆ ತಮ್ಮದೆ ಅಧಿಕಾರವನ್ನು ಮಹಿಳೆಯರು ಸ್ಥಾಪಿಸಿಕೊಳ್ಳಬೇಕು. ಈ ಕುರಿತು ಪ್ರಖರವಾದ, ತೀಕ್ಷ್ಣವಾದ ಕಮ್ಮಟಗಳು, ವಿಶ್ಲೇಷಣೆಗಳು ನಡೆಯಬೇಕೆಂದು ಸ್ತ್ರೀವಾದಿಗಳು ಒತ್ತಿ ಹೇಳಿದರು. ಸ್ತ್ರೀ-ಪುರುಷರ ನಡುವಿನ ಅಸಮಾನತೆಯು ಇಡೀ ಮಾನವಕುಲಕ್ಕೆ ಹಾನಿಕರವಾದುದೆಂದು ಅಭಿಪ್ರಾಯಪಟ್ಟರು. ಕುಟುಂಬದಲ್ಲಿನ ಮಹಿಳೆಯರು ಮನೆಯಲ್ಲಿದ್ದುಕೊಂಡು ಮಾಡುವ ಕಾರ್ಯಗಳು, ಆದಾಯದ ಮನ್ನಣೆಯನ್ನು ಪಡೆಯಲಾರದ್ದನ್ನು ಪ್ರಶ್ನಿಸತೊಡಗಿದರು. ಸ್ತ್ರೀ-

ಪುರುಷನಷ್ಟೇ ಸಮರ್ಥಳು. ಅವಕಾಶ ನೀಡಿದರೆ, ತನ್ನ ಕಾರ್ಯಕೌಶಲ್ಯತೆಯನ್ನು ತೋರಬಲ್ಲಳು. ಆತ್ಮವಿಶ್ವಾಸದಿಂದ ಸಂಪನ್ಮೂಲಗಳ ಮೇಲೆ ಹಿಡಿತ ಸಾಧಿಸಬಲ್ಲಳೆಂಬ ಬಗ್ಗೆ ಜನರಲ್ಲಿ ಅರಿವು ಮೂಡಿಸುವ ಕಾರ್ಯ ಮಾಡತೊಡಗಿದರು. ಈ ನಿಟ್ಟಿನಲ್ಲಿ ಅನೇಕ ಯೋಜನೆಗಳು. ಕಾರ್ಯಕ್ರಮಗಳು ಜಾರಿಯಲ್ಲಿ ಬಂದವು.[೭] ಮಹಿಳೆಯರಿಗಾಗಿ ನಿಷೇಧಿತವಾದ ಸ್ಥಳಗಳಲೆಲ್ಲಾ ಮಹಿಳೆಯರು ಆತ್ಮವಿಶ್ವಾಸದಿಂದ ಭಾಗವಹಿಸತೊಡಗಿದರು. ಅದರಲ್ಲಿ ಯಶಸ್ಸನ್ನು ಕಾಣತೊಡಗಿದರು. ಮಹಿಳಾ ಶಾಲೆ. ಕಾಲೇಜ್. ಬ್ಯಾಂಕ್, ಸಂಘ-ಸಂಸ್ಥೆಗಳು ಆರಂಭವಾದವು. ಶಿಕ್ಷಿತ ಮಹಿಳೆಯರು ಪೂರ್ವಕಲ್ಪಿತ ಸಮಾಜದ ವ್ಯವಸ್ಥೆಯನ್ನು ಪ್ರಶ್ನಿಸತೊಡಗಿದರು. 'ಉದ್ಯೋಗಂ ಪುರುಷ ಲಕ್ಷಣಂ' ಎಂಬ ಉಕ್ತಿಯನ್ನು ಸುಳ್ಳಾಗಿರುಸುವ ನಿಟ್ಟಿನೆಡೆಗೆ ಸಾಗಿದರು. ಕುಟುಂಬ ಕೇಂದ್ರಿತ ಮಹಿಳೆ. ಕುಟುಂಬದಾಚೆಗೆ ಬಂದು ತನ್ನ ಸಾಮರ್ಥ್ಯವನ್ನು, ಕೌಶಲ್ಯತೆಯನ್ನು ತೊರಲಾರಂಭಿಸಿದಳು.

ಈ ರೀತಿಯ ಮಹಿಳಾ ಬೆಳವಣಿಗೆ ಪುರುಷರ ಸ್ಥಾನದ ಆತಂಕಕ್ಕೆ ಕಾರಣವಾಯಿತು. ಮಹಿಳೆಯರ ಸಾರ್ವಜನಿಕ ಭಾಗವಹಿಸುವಿಕೆ ಬಗ್ಗೆ ನಕಾರಾತ್ಮಕ ಧೋರಣೆಗಳು ಕೇಳಿಬರಹತ್ತಿದವು. ಇದರಿಂದ ಮಹಿಳೆಯನ್ನು ಮೂಲಸ್ಥಿತಿಗೆ ತರುವ ಹುನ್ನಾರಗಳು ಪ್ರಾರಂಭವಾದವು. ಮಹಿಳೆಯ ಶಿಕ್ಷಣವನ್ನು ಅವಳ ಉದ್ಯೋಗವನ್ನು ಅಪನಂಬಿಕೆ, ಅನುಮಾನದ ದೃಷ್ಟಿಯಿಂದ ನೋಡಲಾರಂಭಿಸಿದರು. ಮಹಿಳೆಯನ್ನು ಕುಟುಂಬ. ಸಮಾಜ. ಮನೆತನ. ಸಂಸ್ಕೃತಿಯ ನೆಲೆಗಳಲ್ಲಿಯೇ ಕೇಂದ್ರಿಕರಿಸುವ ಪ್ರಕ್ರಿಯೆ ಪ್ರಾರಂಭವಾಯಿತು. ಸುಧಾರಣಾ ಕಾರ್ಯಕ್ರಮಗಳು ಕೇವಲ ಉತ್ತಮ ಮನೆತನದ ಮಹಿಳೆಯರಲ್ಲಿ ಅಲ್ಪಸ್ವಲ್ಪ ಬದಲಾವಣೆ ತಂದಿತ್ತಾದರೂ ಕೆಳವರ್ಗದ, ಅಂಚಿನಲ್ಲಿರುವ ಮಹಿಳೆಯರ ಸ್ಥಿತಿಗತಿಯಲ್ಲಿ ಅಂತಹ ಹೇಳಿಕೊಳ್ಳುವ ಬದಲಾವಣೆಗಳೇನೂ ಆಗಲಿಲ್ಲ. ಕೃಷಿ ಕಾರ್ಮಿಕ ವಲಯದಲ್ಲಿ, ಸಂತೆ-ಮಾರುಕಟ್ಟೆಯಲ್ಲಿ ಹಾಗೂ ಇನ್ನಿತರ ವಲಯಗಳಲ್ಲಿ ದುಡಿಯುತ್ತಿದ್ದ ಕೆಳವರ್ಗದ ಮಹಿಳೆಯರ ಜೀವನದಲ್ಲಿ ಯಾವುದೇ ಬದಲಾವಣೆಗಳಾಗಲಿಲ್ಲ. ಕುಡಿದುಬರುವ ಗಂಡ. ದುಡ್ಡು ಕೇಳುವ ಮಗ. ಕುಟುಂಬದಲ್ಲಿ ಯಜಮಾನರಾಗಿ ಮಹಿಳೆಯರನ್ನು ನಿಯಂತ್ರಿಸುತ್ತಿದ್ದರು. ಪುರುಷರ ಪ್ರಧಾನ ಕೌಟುಂಬಿಕ ಚೌಕಟ್ಟಿನಿಂದ ಹೊರಬಂದು, ಪುರುಷರಿಗೆ ಸಮಾನವಾಗಿ ಕಾರ್ಯ ಮಾಡುವವರು ಉತ್ತಮ ವರ್ಗದವರಾಗಿದ್ದರು ಹಾಗೂ ನಗರ ಪ್ರದೇಶದ ಮಹಿಳೆಯರಾಗಿದ್ದರು. ಗ್ರಾಮದಲ್ಲಿ ವಾಸಿಸುವ ಮಹಿಳೆಯರ ಸಾಮಾಜಿಕ, ಆರ್ಥಿಕ ಸಮಸ್ಯೆಗಳು ಬೇರೆ ರೀತಿಯದಾಗಿದ್ದವು. ಕನಿಷ್ಟ ಮೂಲಭೂತ ಸೌಕರ್ಯಗಳಿಂದ ಗ್ರಾಮಗಳಲ್ಲಿ ಮಹಿಳೆ ಹಲವು ರೀತಿಯ ಸಂಘರ್ಷಗಳನ್ನು ಎದುರಿಸುತ್ತಿದ್ದಳು. ಸಂಪ್ರದಾಯ, ಸಮಾಜದ ಕಟ್ಟುಪಾಡುಗಳನ್ನು ವಿರೋಧಿಸುವ ಮಹಿಳೆಯನ್ನು ಕುಟುಂಬ ದೂರಮಾಡುತ್ತಿತ್ತು. ಜಾತಿ, ಧರ್ಮ, ಲಿಂಗದ ಹೆಸರಿನಲ್ಲಿ ಮಹಿಳೆ ಮೇಲೆ ದಬ್ಬಾಳಿಕೆ ನಡೆಯುತ್ತಿತ್ತು. ೧೯೭೦, ೧೯೯೧ರ ಜನಗಣತಿ ಆಧರಿಸಿ ೧೯೮೫ ರಲ್ಲಿ ಪ್ರವೀಣ್ ಹಾಗೂ ಲೀಲಾ ವಿಸಾರಿಯಾ ದಾಖಲಿಸಿದಂತೆ ಶೇಕಡ ೧೩ ರಿಂದ ೨೨ ರ ವರೆಗಿನ ಕುಟುಂಬಗಳಲ್ಲಿ

ಮಹಿಳೆಯರೇ ಮನೆಯ ಆರ್ಥಿಕ ಜವಾಬ್ಧಾರಿಯನ್ನು ಹೊತ್ತಿದ್ದರು. ಆದರೂ ಅವರ ದುಡಿಮೆ, ಆದಾಯ ಉತ್ಪಾದಕ ವರ್ಗಕ್ಕೆ ಸೇರುತ್ತಿರಲಿಲ್ಲ. ಕುಡಿತದ ಚಟಕ್ಕೊಳಗಾದ, ದುಡಿಯಲಾರದ ಗಂಡನ ಹೆಂಡತಿ ಅನಿವಾರ್ಯವಾಗಿ ಕುಟುಂಬದ ಜವಾಬ್ಧಾರಿ ಹೊತ್ತಿರುತ್ತಾಳೆ. ಹೀಗೆ ನಿರಂತರವಾಗಿ ಮಾನಸಿಕ ತೊಳಲಾಟಗಳಲ್ಲಿ ನಲುಗುವ ಮಹಿಳೆಯ ಸಮಸ್ಯೆಗಳು ತೀವ್ರ ಚರ್ಚೆಗೆ ಬರಲೇಯಿಲ್ಲ. ಕುಟುಂಬದಲ್ಲಿನ ಮಹಿಳೆಯ ಆರೋಗ್ಯ ಆ ಮನೆಯ ಆರ್ಥಿಕ ಹಿನ್ನಲೆಯನ್ನು ಅವಲಂಬಿಸಿತ್ತು. ಬಡತನದ ಸಮಸ್ಯೆಯೊಂದಿಗೆ ಆರೋಗ್ಯ ಸಮಸ್ಯೆ ಮಹಿಳೆಯ ಬೆಳವಣಿಗೆಯ ಕುಂಠಿತಕ್ಕೆ ಕಾರಣವಾಯಿತು.

ನಗರದಲ್ಲಿ ವಾಸಿಸುವ ಮಹಿಳೆಯರ ಸಮಸ್ಯೆ ಗ್ರಾಮೀಣ ಮಹಿಳೆಯರ ಸಮಸ್ಯೆಗಿಂತ ಭಿನ್ನವಾಗಿತ್ತು. ಮಹಿಳೆಯರು ಪುರುಷರಿಗೆ ಸಮಾನವಾದ ಶಿಕ್ಷಣ ಪಡೆದರೂ, ಸಾಮರ್ಥ್ಯ ಇದ್ದರೂ ಅವಕಾಶಗಳು ಕಡಿಮೆ ಇರುತ್ತಿದ್ದವು. ಪುರುಷರಿಗೆ ಉದ್ಯೋಗಾವಕಾಶ ಹೆಚ್ಚು ಜೊತೆಗೆ ಕಠಿಣ ಕೆಲಸದ ನೆಪದಲ್ಲಿ ಉನ್ನತ ಸ್ಥಾನ-ಮಾನದ ಅಧಿಕಾರ ಪ್ರಾಪ್ತಿ.

U.N.D.P. ಯ Women and New Economic Order ವರದಿ ತಿಳಿಸುವ ಪ್ರಕಾರ ಜಗತ್ತಿನಲ್ಲಿನ ಮಹಿಳೆ ಒಟ್ಟು ಜನಸಂಖ್ಯೆಯ ೧/೨ ರ ಭಾಗವಾಗಿ, ದುಡಿಮೆಯಲ್ಲಿ ೧/೩ ಭಾಗವಾಗಿರುವ ಮಹಿಳೆಯ ವರಮಾನ ಶೇ. ೩೦ ರಷ್ಟು ಮಾತ್ರ. ಜಗತ್ತಿನ ಒಟ್ಟು ಆಸ್ತಿಯಲ್ಲಿ ಮಹಿಳೆಯ ಒಡೆತನ ಶೇ. ೧ ರಷ್ಟು ಮಾತ್ರ. ಜನಸಂಖ್ಯೆ ಹಾಗೂ ದುಡಿಮೆಯಲ್ಲಿ ಹೆಚ್ಚಿನ ಭಾಗದಲ್ಲಿದ್ದರೂ ವರಮಾನ ಹಾಗೂ ಆಸ್ತಿಯಲ್ಲಿ ಅತಿ ಕಡಿಮೆ ಭಾಗ ಪಡೆದಿರುವರು. ಈ ವರಮಾನ, ಆಸ್ತಿ ಹಂಚಿಕೆಯನ್ನು ಪುರುಷ ತನ್ನ ನಿಯಂತ್ರಣದಲ್ಲಿಟ್ಟುಕೊಂಡು ಮಹಿಳೆಯನ್ನು ನಿರಂತರವಾಗಿ ಎರಡನೇಯ ಸ್ಥಾನಕ್ಕೆ ದೂಡಿದೆ.

ಮಹಿಳೆಗೆ ಅರ್ಹತೆ ಇದ್ದರೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಹೇರಳವಾದ ಅವಕಾಶಗಳಿಲ್ಲ. ಮಹಿಳೆ ಸಂಪೂರ್ಣವಾಗಿ ಸಬಲಳಾಗಬೇಕಾದ ಬಗೆಯ ರೀತಿಯನ್ನು ಹಲವಾರು ಮಹಿಳಾ ಚಿಂತಕರು ಅಭ್ಯಸಿಸಿ ಹಲವಾರು ಪರಿಹಾರೋಪಾದಿಗಳನ್ನು ಕಂಡುಕೊಂಡರು. ಶಿಕ್ಷಿತ ಮಹಿಳೆಯರು ಮಹಿಳಾ ಹಕ್ಕುಗಳ ಬಗ್ಗೆ ಚಿಂತನೆ ನಡೆಸಹತ್ತಿದರು. ಸಮಾಜದಲ್ಲಿ ಆಳವಾಗಿ ಬೇರೂರಿರುವ ಅಸಮಾನ ನೆಲೆಯನ್ನು ಬದಲಿಸುವ ಕಾರ್ಯವಾಗಬೇಕು. ಮಹಿಳೆಯರ ಅಧೀನತೆಗೆ ಕಾರಣವಾಗಿರುವ ಕಾರಣಗಳನ್ನು ಶೋಧಿಸಬೇಕು. ಸಬಲೀಕರಣದ ಬಹು ಮುಖ್ಯ ಗುಣವಾದ ಸ್ವಾತಂತ್ರ್ಯ, ಸ್ವಾವಲಂಬನೆ, ಹಕ್ಕು, ಅಧಿಕಾರದ ಪೂರ್ಣಜ್ಞಾನ, ತನ್ನತನದ ಮೌಲ್ಯ, ಸ್ವ-ಇಚ್ಛೆ ಮತ್ತು ಸ್ವ-ಗೌರವ ಹೆಚ್ಚಿಸುವ ವಾತಾವರಣ ನಿರ್ಮಿತವಾಗಬೇಕು. ಅಧಿಕಾರದ ಕೇಂದ್ರ ಬಿಂದುವಾಗಿ ಮಹಿಳೆ ಸಮಾಜದ ಮುಖ್ಯವಾಹಿನಿಗೆ ಬರಬೇಕು. ತನ್ನ ಚಿಂತನೆಗಳನ್ನು, ವಿಚಾರಗಳನ್ನು ಅಭಿವ್ಯಕ್ತಗೊಳಿಸುವ ಸ್ವಾತಂತ್ರ್ಯ ದೊರಕಬೇಕು.[೮]

ರಾಷ್ಟ್ರದ ಸಂಪನ್ಮೂಲಗಳ ಮೇಲಿನ ಹಿಡಿತ, ಅರಿವು, ಮುಕ್ತ ಸಂಚಾಲನೆ, ಆಯ್ಕೆ ಅವಕಾಶ ಮಹಿಳೆಗೆ ಹೇರಳವಾಗಿ ದೊರಕಬೇಕು. ಮಹಿಳೆಯರ ಕಾರ್ಯಕ್ಷಮತೆ, ನಿರ್ಧಾರ, ನಿರ್ಣಯ ರೂಪಿಸುವ ಪ್ರಕ್ರಿಯೆಯಲ್ಲಿನ ಭಾಗವಹಿಸುವಿಕೆ, ಕುಟುಂಬದ ವಿಷಯಗಳಲ್ಲಿನ ನಿರ್ಣಯ, ಆಸ್ತಿಯಲ್ಲಿ ಸಮಪಾಲು, ಮಹಿಳೆಯನ್ನು ಆರ್ಥಿಕ ಸಬಲಳನ್ನಾಗಿ ಮಾಡುವ ಮೂಲಕ ಅವಳಲ್ಲಿ ಧೈರ್ಯ, ಚೈತನ್ಯ ಹೆಚ್ಚಿಸುತ್ತದೆ.

ಸರ್ಕಾರದ ಯೋಜನೆಗಳು ಅಭಿವೃದ್ಧಿ ಫಲಗಳು ಎಲ್ಲಿಯವರೆಗೆ ಎಲ್ಲಾ ವರ್ಗದ ಮಹಿಳೆಯರನ್ನು ತಲುಪುವದಿಲ್ಲವೊ, ಅಲ್ಲಿಯವರೆಗೆ ಸಬಲೀಕರಣಕ್ಕೆ ನಿಜ ಅರ್ಥ ದೊರಕವುದಿಲ್ಲ. ಮಹಿಳೆಯರು ಅಭಿವೃದ್ಧಿಯ ಮುಖ್ಯವಾಹಿನಿಗೆ ಬರಬೇಕು. ಪುರುಷ ನಿರ್ಮಿತ ವ್ಯವಸ್ಥೆಯ ಲೋಪದೋಷಗಳನ್ನು ಪಶ್ನಿಸುವ, ಬದಲಿಸುವ ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದಾಗ ಮಾತ್ರ ಮಹಿಳೆಯರ ಮೇಲಿನ ದೌರ್ಜನ್ಯಗಳು ಕಡಿಮೆಯಾಗುವುವು. ಮಹಿಳಾ ವಿರೋಧಿಯಾಗಿರುವ ಸಾಮಾಜಿಕ ಕಟ್ಟುಪಾಡುಗಳನ್ನು, ನಂಬಿಕೆಗಳನ್ನು ಸಂಪ್ರದಾಯಗಳನ್ನು ತೊಡೆದುಹಾಕಬೇಕು.

ಸಬಲೆಯರಾದ ಮಹಿಳೆಯರು ಇತರ ಮಹಿಳೆಯರಿಗೆ ಮಾದರಿಯಾಗಿ, ಮಹಿಳೆಯರ ಸಮಸ್ಯೆಗಳನ್ನು ಗುರುತಿಸುವ, ಅದಕ್ಕೆ ಪರಿಹಾರ ಕಂಡುಹಿಡಿಯುವ ಕೌಶಲ್ಯತೆ ಪಡೆವ ಕಮ್ಮಟ ಏರ್ಪಡಿಸಬೇಕು. ಮಹಿಳೆಯರು ಪರಾವಲಂಬಿಗಳಾದಷ್ಟು, ಪುರುಷರು ಅವರನ್ನು ಕನಿಷ್ಟವಾಗಿರಿಸುವ, ಅಶಕ್ತರಾಗಿರಿಸುವ ನಿಟ್ಟಿನಲ್ಲಿ ಕಾರ್ಯ ಮಾಡುತ್ತಾರೆ. ಕಾರಣ ಹೆಚ್ಚೆಚ್ಚು ಮಹಿಳೆಯರಿಗೆ ಗೃಹಕೈಗಾರಿಕೆ, ಚಿಕ್ಕ ವ್ಯಾಪಾರ, ಅಕ್ಷರ ಕಲಿಕೆ, ಆರೋಗ್ಯ ಸುಧಾರಣೆ, ಮಹಿಳೆಯರ ಸ್ವಾವಲಂಬನೆ ಹೆಚ್ಚಿಸುವ ಉದ್ಯೋಗಗಳ ಬಗ್ಗೆ ಮಾಹಿತಿ ನೀಡಬೇಕು. ಅದರ ಉಪಯೋಗ ಪಡೆವ ಮಹಿಳೆಯರು ಪ್ರಭಲರಾಗುತ್ತಾರೆ.

ಮಹಿಳಾ ಸಬಲೀಕರಣ ಪ್ರಕ್ರಿಯೆಯು ಮೇಲಿನಿಂದ ಕೆಳಗೆ ಬರುವ ಅಥವಾ ಕೆಳಗಿನಿಂದ ಮೇಲೆ ಹೋಗುವ ಲಾಭಾಧಾರಿತವಾಗಿರಬಾರದು (Vertical). ಬದಲಾಗಿ ಎಲ್ಲರಿಗೂ ಸಮಾನವಾಗಿ ಅನ್ವಯವಾಗುವ ಸಮತಲಾಧಾರಿತವಾಗಿರಬೇಕು (Horizontal). ಮಹಿಳೆಯರು ಲಿಂಗ ಜಾತಿ ಮತ್ತು ವರ್ಗದ ತಾರತಮ್ಯಗಳಿಂದ ಹೆಚ್ಚು ಅವಮಾನಿತರಾಗಿರುತ್ತಾರೆ. ಕೆಳವರ್ಗದ ಮಹಿಳೆಯರು ತಮ್ಮ ಜಾತಿಯ ಪುರುಷರಿಂದ, ಮೇಲ್ವರ್ಗದ ಪುರುಷರಿಂದ ತುಳಿತಕ್ಕೊಳಗಾಗಿರುತ್ತಾರೆ. ಜಾತಿ ತಾರತಮ್ಯವನ್ನು ಸಂಪೂರ್ಣವಾಗಿ ತೊಡೆದುಹಾಕಿ, ಮಹಿಳೆಯರನ್ನು ಸಶಕ್ತಗೊಳಿಸಲು ಅವರಿಗೆ ಮೂಲಭೂತ ಅವಶ್ಯಕಗಳನ್ನು ಹೆಚ್ಚೆಚ್ಚು ಪೂರೈಸಬೇಕು. ಅವರ ಜೀವನದ ಆಯ್ಕೆ ಅವರಿಗೆ ಸೇರಬೇಕು. ಸರ್ಕಾರ ಕೂಡ ಈ ನಿಟ್ಟಿನಲ್ಲಿ ಯೋಜನೆ ರೂಪಿಸಿ, ಕಾರ್ಯರೂಪಕ್ಕೆ ತರಬೇಕು. ಆ ಯೋಜನೆಗಳು ನೇರವಾಗಿ

ಅಂಚಿನಲ್ಲಿರುವವರಿಗೆ ತಲುಪಬೇಕು. ಈ ಯೋಜನೆ ಕಾರ್ಯರೂಪಕ್ಕೆ ಬರಬೇಕಾದರೆ ಹೆಚ್ಚೆಚ್ಚು ಮಹಿಳೆಯರು ನಿರ್ಣಯ ತೆಗೆದುಕೊಳ್ಳುವ ಅಧಿಕಾರ ಕೇಂದ್ರಿತ ಕ್ಷೇತ್ರದಲ್ಲಿ ಭಾಗವಹಿಸಬೇಕು. ರಾಜಕಾರಣದಲ್ಲಿ ತಳಮಟ್ಟದ ಮಹಿಳೆ ಪ್ರವೇಶಿಸಿ, ಅಭಿವೃದ್ಧಿ ಯೋಜನೆ ರೂಪಿಸುವ, ಕಾರ್ಯರೂಪಕ್ಕೆ ತರುವ ಪ್ರಕ್ರಿಯೆಯಲ್ಲಿ ನೇರವಾಗಿ ಭಾಗವಹಿಸಿದಾಗ ಮಾತ್ರ ಪುರುಷ ನಿರ್ಮಿತ ವ್ಯವಸ್ಥೆಯಲ್ಲಿ ಬದಲಾವಣೆ ಸಾಧ್ಯ ಹಾಗೂ ಮಹಿಳೆಯರಿಗೆ ಹೆಚ್ಚಿನ ಪ್ರಾಧಾನ್ಯತೆ ದೊರಕುವುದು. ಆಗ ಮಹಿಳೆಯರಿಗೆ ವಿಶೇಷವಾದ ಕಾರ್ಯಕ್ರಮಗಳು ರೂಪಿತವಾಗಿ, ಜಾರಿಗೊಳಿಸುವುದು ಅನಿವಾರ್ಯವಾಗುತ್ತದೆ.

ಮಹಿಳಾ ಸಶಕ್ತೀಕರಣದ ಪರಿಕಲ್ಪನೆ ರಾಜಕೀಯ ಕ್ಷೇತ್ರದಿಂದ ಆರಂಭಗೊಳ್ಳಬೇಕಾಗಿದೆ. ಸಮಾಜದ ಉಳಿದೆಲ್ಲಾ ಕ್ಷೇತ್ರಗಳಗಿಂತ ಶಕ್ತಿಶಾಲಿಯಾದ ಕ್ಷೇತ್ರ ರಾಜಕೀಯ. ರಾಜಕೀಯ ಕ್ಷೇತ್ರವು ಪ್ರಭಲವಾಗಿದ್ದು, ಇಲ್ಲಿಂದಲೇ ಸಾಮಾಜಿಕ ನೀತಿ ನಿಯಮಗಳು, ಕಾನೂನುಗಳು, ಅಭಿವೃದ್ಧಿ ಯೋಜನೆಗಳು ಹಾಗೂ ಸಬಲೀಕರಣದ ಪ್ರಕ್ರಿಯೆಗಳು ನಡೆಯುತ್ತವೆ. ಕೇಂದ್ರ-ರಾಜ್ಯ ಸರ್ಕಾರಗಳು ರೂಪಿಸುವ ಯೋಜನೆಗಳು ರಾಷ್ಟ್ರ-ರಾಜ್ಯದುದ್ದಕ್ಕೂ ಅನ್ವಯಿಸುತ್ತವೆ. ಜನತಾ ಪ್ರತಿನಿಧಿಯಾಗಿ ಚುನಾಯಿಸಲ್ಪಡುವ ಮಹಿಳೆ ಸರ್ಕಾರದ ಮುಖ್ಯ ವಾಹಿನಿಯಲ್ಲಿ ಬಂದು, ಸಮಾಜದ ಎಲ್ಲ ವರ್ಗಗಳ ಮಹಿಳಾ ಪ್ರತಿನಿಧಿಯಾಗಿರುತ್ತಾಳೆ. ಆಗವಳ ಸ್ಥಾನಮಾನ ಹೆಚ್ಚುವದರ ಜೊತೆಗೆ, ಸಮಾಜದಲ್ಲಿನ ಮೂಲ ಕಲ್ಪಿತ ಬೇರುಗಳನ್ನು ತೆಗೆದುಹಾಕಬಹುದು. ಸಾಮಾಜಿಕ ಸಬಲೀಕರಣ ಸಾಧ್ಯವಾಗುವುದೇ ರಾಜಕೀಯ ಸಬಲೀಕರಣವನ್ನು ಪಡೆಯುವದರಿಂದ.

**ಉಲ್ಲೇಖಗಳು: –**


೧) ಹೇಮಲತಾ. ಹೆಚ್.ಎಂ., ೨೦೦೩, 'ಮಹಿಳಾ ಸಶಕ್ತೀಕರಣ' ಪುಟ ೭

೨) ಡಾ. ಕಿಶೋರಿನಾಯಕ, ೧೯೯೯ 'ಸ್ತ್ರೀವಾದ ನೆಲೆಗಳು ಹಾಗೂ ನಿಲುವುಗಳು' ಪುಟ ೭೮.

೩) ವೆಂಕಟರಾಮ. ಜಿ, ೨೦೦೩, 'ಮಹಿಳಾ ಸಬಲೀಕರಣ ಮತ್ತು ಅಧಿಕಾರ ಸಂರಚನೆ', ಪಿ.ಎಚ್.ಡಿ. ಪ್ರಬಂಧ, ಪುಟ ೨೩.

೪) ಡಾ. ಬಿ.ಎನ್. ಸುಮಿತ್ರಾಬಾಯಿ, ೨೦೦೦, 'ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು', ಪುಟ ೬೫.

೫) ಮಧುರ, ೧೯೯೯, 'ಹಕ್ಕುಗಳಿಗಾಗಿ ಮಹಿಳಾ ಹೋರಾಟ' ಸಂಯುಕ್ತ ಕರ್ನಾಟಕ, ಪುಟ ೪.

೬) ಬಡಗಸೀಮೆ ಮಹೇಶ, ೨೦೦೪. 'ಮಹಿಳಾ ಸಶಕ್ತೀಕರಣ – ಕೆಲವು ಒಳನೋಟಗಳು. ಪುಟ ೮೫.

೭) ಅನಿತಾ ರತ್ನಂ, ೧೯೯೫, 'ಮಹಿಳಾ ಸಬಲೀಕರಣ ಸಮಸ್ಯೆಗಳು' ಮಾನಸ, ಪುಟ ೨೪.

೮) ಪೂರ್ಣಿಮಾ. ಆರ್, ೧೯೯೭. 'ರಾಜಕೀಯದಲ್ಲಿ ಮಹಿಳೆ' ಪುಟ ೨೫.

ರಾಜಕೀಯ ರಾಜಕಾರಣ ಎಂಬುದು ಸಮಾಜ ರೂಪಿಸಿಕೊಂಡ, ರಾಷ್ಟ್ರಕ್ಕೆ ಅವಶ್ಯಕವಾದ ಸಂಸ್ಥೆ.[1] ಲಿಂಗಭೇದವೆಣಿಸದೆ ಜನರು ಎಲ್ಲಿ ತಮ್ಮ ಹಕ್ಕುಬಾದ್ಯತೆಗಳನ್ನು ಅನುಭವಿಸುವರೋ ಅಲ್ಲಿ ರಾಷ್ಟ್ರದ ಅಭಿವೃದ್ಧಿ ಸಾಧ್ಯ. ಸಂವಿಧಾನದತ್ತವಾದ ಮೂಲಭೂತ ಹಕ್ಕುಗಳು ವ್ಯಕ್ತಿಯ ವ್ಯಕ್ತಿತ್ವವನ್ನು ಹೆಚ್ಚಿಸುವ ಸಾಧನಗಳು. ಸಮಾಜ ವ್ಯವಸ್ಥೆಯಲ್ಲಿನ ಅಸಮತೋಲನ ಅಧಿಕಾರ ಹಂಚಿಕೆ, ಆ ರಾಷ್ಟ್ರದ ಅಭಿವೃದ್ಧಿಗೆ ಮಾರಕ. ಸಮಾಜ ರಚಿತವಾದದ್ದೆ ಪುರುಷ ಪ್ರಧಾನ ವ್ಯವಸ್ಥೆಯಿಂದ ಹೀಗಾಗಿ ಸಮಾಜದ ಎಲ್ಲಾ ಕ್ಷೇತ್ರಗಳೂ ಲಿಂಗ ಅಸಮಾನ ನೆಲೆಗಳಿಂದ ರೂಪಗೊಂಡಿವೆ.

ರಾಜಕೀಯ ಕ್ಷೇತ್ರದಲ್ಲಿ ಮಹಿಳಾ ಭಾಗವಹಿಸುವಿಕೆ ಬೆರಳಣಿಕೆಯಷ್ಟು. ಕೌಟುಂಬಿಕ ನೆಲೆಯಿಂದ ಮಹಿಳೆಯನ್ನು ಬಂಧಿಸಿ, ಅವಳ ಅಂತರ್ಗತ ಸಾಮರ್ಥ್ಯ, ಚಿಂತನೆಯನ್ನು ಹತ್ತಿಕ್ಕಿ, ಅವಳಿಗೆ ಅಭಿವ್ಯಕ್ತಿ ಸ್ವಾತಂತ್ರ್ಯ ನೀಡದೆ, ಅವಳನ್ನು ಕನಿಷ್ಠವಾಗಿರಿಸಿದೆ. ಪಿತೃ ಪ್ರಧಾನ ಕುಟುಂಬಗಳು, ಕುಟುಂಬದ ಹೊರಗಿನ ಎಲ್ಲಾ ಸಾಮಾಜಿಕ ಕ್ಷೇತ್ರಗಳಲ್ಲಿನ ಚಟುವಟಿಕೆಗಳು ಪುರುಷನ ನಿಯಂತ್ರಣಕ್ಕೊಳಗಾಗಿವೆ. ರಾಜಕೀಯ ಕ್ಷೇತ್ರ,ವು ಸಮಾಜದ ನೀತಿ, ನಿಯಮ ರೂಪಿಸುವ, ಬದಲಿಸುವ ಪ್ರಖರವಾದ ಸಂಸ್ಥೆ. ಇಂಥಹ ಸಂಸ್ಥೆಯಲ್ಲಿ ಮಹಿಳೆಯರಿಗೆ ಪ್ರಾಧಾನ್ಯತೆ ನೀಡಿದರೆ ಮಹಿಳೆ ಅನಾದಿಕಾಲದಿಂದ ರಚಿತವಾದ, ಪುರುಷ ಕಲ್ಪಿತ ನೀತಿ-ನಿಯಮಗಳನ್ನು ಬದಲಿಸಿ, ಸಮಾನ ಸ್ಥಾನಮಾನ ಪಡೆಯಬಹುದು ಎಂಬ ಉದ್ದೇಶದಿಂದಾಗಿಯೇ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಮಹಿಳೆಗೆ ಮುಕ್ತ ಅವಕಾಶ ನಿರಾಕರಿಸಲಾಗಿದೆ.[2]

ಜೈವಿಕ ವಿಭಿನ್ನತೆ ಹೊರತುಪಡಿಸಿದರೆ, ಇನ್ನುಳಿದ ವಿಷಯಗಳಲ್ಲಿ ಸ್ತ್ರೀ-ಪುರುಷರು ಸಮಾನರು. ಆದರೆ ಸಮಾಜದ ವಿವಿಧ ಸ್ತರಗಳಲ್ಲಿ ಕಂಡುಬರುವುದು ಅಸಮಾನ ಹಂಚಿಕೆ. ಎಲ್ಲಾ ಕಾಲದಲ್ಲಿಯೂ ರಾಜಕೀಯ ಚುಕ್ಕಾಣಿಯನ್ನು ಹಿಡಿದವರು ಪುರುಷರೇ. ರಾಷ್ಟ್ರ-ರಾಜ್ಯದ ಮುಖಂಡತ್ವ ಸಮುದಾಯದ ಹಿರಿಯರ ಕೈಯಲ್ಲಿರಲಿ, ರಾಜನ ಕೈಯಲ್ಲಿರಲಿ ಅಥವಾ ಚುನಾಯಿತ ಪ್ರತಿನಿಧಿಗಳಲ್ಲೇ ಇರಲಿ, ಅದು ಪುರುಷನೇ ಆಗಿರುತ್ತಾನೆ. ರಾಜಕೀಯ ಕ್ಷೇತ್ರ ಸಾರ್ವಜನಿಕ ಕ್ಷೇತ್ರವಾದ್ದರಿಂದ ಕುಟುಂಬ ಕೇಂದ್ರಿತವಾಗಿ ಗುರುತಿಸಲ್ಪಡುವ ಮಹಿಳೆಗೆ ಪ್ರವೇಶ ನಿಷಿದ್ಧವಾಗಿತ್ತು. ಅಧುನಿಕ ಪೂರ್ವ ಕಾಲದಲ್ಲಿ ಅಧಿಕಾರವು ವರ್ಣಾಧಾರಿತ ತಳಹದಿಯ ಮೇಲೆ ಸಂರಚಿತವಾಗುತ್ತಿತ್ತು. ವರ್ಣ ಹಾಗೂ ವರ್ಗಶ್ರೇಣೀಕರಣಕ್ಕೆ

ಅನುಗುಣವಾಗಿ ಪುರುಷರು ಅಧಿಕಾರವನ್ನು ಪಡೆಯುತ್ತ ಬಂದರು. ಕಾಲಕ್ರಮೇಣದಲ್ಲಿ ಬ್ರಿಟೀಷರ ಆಗಮನ ಮುಂಚಿನ ವ್ಯವಸ್ಥೆಯನ್ನೇ ಬದಲಿಸಿತು. ನಂತರದ ಕಾಲಘಟ್ಟದಲ್ಲಿ ರಾಜಮನೆತನದ, ಉನ್ನತ ವರ್ಗದ ಮಹಿಳೆಯರು ರಾಜಕೀಯ ಸ್ಥಾನಮಾನ ಪಡೆದರು. ಆ ಸ್ಥಾನಮಾನ ಬೆರಳಣಿಕೆಯದ್ದಾಗಿತ್ತು. ರಾಜ್ಯದ ಅಧಿಕಾರವನ್ನು ಕುಟುಂಬದ ನೆಲೆಯಿಂದ ಪಡೆದಿದ್ದರೂ, ತಮ್ಮ ವಂಶದ ಪುರುಷರ, ರಾಜ್ಯದ ಜನರ ಪ್ರತಿನಿಧಿಯಾಗಿ ಸಮರ್ಥವಾಗಿ ಆಳಿದ್ದು ಪ್ರಶಂಸನೀಯ.

ಭಾರತದ ದೇಸಿಯ ರಾಜ-ಮಹಾರಾಜರುಗಳು ಮಹಿಳೆಯರನ್ನು ತಮ್ಮ ಭೋಗ ಜೀವನದ ಭಾಗವೆಂಬಂತೆ ಪರಿಗಣಿಸಿದ್ದಾರೆ. ಜೊತೆಗೆ ಸನಾತನ ಪುರುಷ ಕಲ್ಪಿತ ಧರ್ಮಶಾಸ್ತ್ರಗಳು ಮಹಿಳೆಯರನ್ನು ದೈವಿಶಕ್ತಿಯಾಗಿ ಪ್ರತಿನಿಧೀಕರಿಸಿವೆ. ಮಹಿಳೆ ಪುರುಷನಿಗೆ ಅಧೀನಳಾಗಿ ಬಾಳುವುದು ಆದರ್ಶ ನಾರಿಯರ ಲಕ್ಷಣವೆಂಬಂತೆ ಚಿತ್ರಿಸಲಾಗಿತ್ತು. ಈ ರೀತಿಯ ಕಲ್ಪಿತ ವ್ಯವಸ್ಥೆಯನ್ನು ಪ್ರಶ್ನಿಸುವ ಚಿಂತನೆಗಳು ಸ್ತ್ರೀವಾದಿಗಳಲ್ಲಿ ಮಾಡತೊಡಗಿದವು.[೩] ಭಾರತೀಯ ಸಮಾಜದಲ್ಲಿನ ಮಹಿಳೆಯರ ಹೋರಾಟಕ್ಕೆ ಸ್ಫೂರ್ತಿಯಾದವರು ಝಾನ್ಸಿರಾಣಿ ಲಕ್ಷ್ಮೀಬಾಯಿ, ಕಿತ್ತೂರು ಚೆನ್ನಮ್ಮ, ರಾಣಿ ಅವಂತಿಬಾಯಿ ಮುಂತಾದವರು. ಇವರೆಲ್ಲ ಉತ್ತಮ ವರ್ಗದ ಮಹಿಳೆಯರಾಗಿದ್ದರು. ಮಧ್ಯಮ ವರ್ಗ, ಬಡವರ್ಗದ ಮಹಿಳೆಯರ ಹೋರಾಟ ಮುಖ್ಯವಾಹಿನಿಗೆ ಬರಲೇಯಿಲ್ಲ. ಗಾಂಧೀಜಿ ನೇತೃತ್ವದ ಅಸಹಕಾರ ಚಳುವಳಿ, ಅಹಿಂಸಾತ್ಮಕ, ಸತ್ಯಾಗ್ರಹ ಚಳುವಳಿಗಳಲ್ಲಿ ಪಾಲ್ಗೊಂಡ ಸಾವಿರಾರು ಮಹಿಳೆಯರು ಆದರ್ಶದ ನೆಲೆಯಲ್ಲಿ ಗುರುತಿಸಲ್ಪಟ್ಟರು. ಆಗ ಮಹಿಳೆಯರ ಮನಸ್ಸಿನಲ್ಲಿ ಚಿಗುರೊಡೆದ ರಾಷ್ಟ್ರದ ಸದಸ್ಯತ್ವದ ಪ್ರಶ್ನೆಯನ್ನು ದೇಶವಿಮೋಚನಾ ಭಾಗವಾಗಿಯೇ ನೋಡಲಾಯಿತು. ರಾಷ್ಟ್ರೀಯ ಹೋರಾಟದ ಯಶಸ್ಸಿಗೆ ಪುರುಷನನ್ನೇ ಪ್ರಧಾನ ಮಾಡಲಾಯಿತು. ಹೋರಾಟದಲ್ಲಿ ಭಾಗಿಯಾದ ಮಹಿಳೆ ನಂತರದಲ್ಲಿ ಮರಳಿ ಮನೆಗೆ ನಡೆಯುವಂತೆ ಕರೆನೀಡಲಾಯಿತು.[೪]

ರಾಜಕೀಯ ಸಬಲೀಕರಣ ಕುರಿತ ಸಾಧ್ಯತೆ ಬಗ್ಗೆ ಮಹಿಳಾ ಚಳುವಳಿಗಳು ಹಾಗೂ ಸ್ತ್ರೀ-ಪುರುಷರ ನಡುವಿನ ರಾಜಕೀಯ ಸಂಘರ್ಷ ಕುರಿತ ಮಹಿಳೆಯರ ಹೋರಾಟದ ನೆಲೆಯ ಕುರಿತ ಅಧ್ಯಯನವನ್ನು ವಿಶ್ಲೇಷಿಸಲಾಗಿ, ರಾಷ್ಟ್ರೀಯ ಹೋರಾಟದಲ್ಲಿ ಮಹಿಳೆಯರ ಭಾಗವಹಿಸುವಿಕೆ ಹಾಗೂ ಮಹಿಳಾ ಮೀಸಲಾತಿ ಮುಖಾಂತರ ಮಹಿಳೆಯರ ರಾಜಕೀಯ ಪ್ರವೇಶ ನೇರ ಚಿಂತನೆಗೆ ಹಚ್ಚುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಹಾಗೂ ಸ್ವಾತಂತ್ರ್ಯ ನಂತರದಲ್ಲಿನ ಮಹಿಳೆಯರ ಸಮಸ್ಯೆಗಳನ್ನು ಪುರುಷ ಪ್ರಧಾನ ಸಮಾಜ ನಿರ್ದಾಕ್ಷಿಣ್ಯವಾಗಿ ಕಡೆಗಣಿಸುತ್ತಾ ಬಂದಿತು. ನಾಗರಿಕತೆಯ ನಡೆನುಡಿ, ಸಾಂಸ್ಕೃತಿಕ ವಿಕಾಸ, ವೈಜ್ಞಾನಿಕ ಅವಿಷ್ಕಾರಗಳು ಬೆಳೆದರೂ ಸಾಮಾಜಿಕ ಬದಲಾವಣೆಯಾಗಲಿಲ್ಲ.

ಪುರುಷ ನಿರ್ಮಿತ ಸಂಸ್ಕೃತಿಯ ನಿರೀಕ್ಷೆಗಳನ್ನು ಈಡೇರಿಸುವ ವಾಹಿನಿಯಾಗಿ ಮಹಿಳೆಯರನ್ನ ಗುರುತಿಸುತ್ತಿತ್ತು.ಸ್ವಾತಂತ್ರ್ಯದ ಧೀರ್ಘ ಅವಧಿಯಲ್ಲಿನ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ-ಯಿಂದಾಗಿ. ಮಹಿಳೆಯರ ಸಮಸ್ಯೆಗಳನ್ನು ಚರ್ಚಿಸಲಾಯಿತೆ? ಎಂಬುದು ಮುಖ್ಯ ಪ್ರಶ್ನೆಯಾಗಿ ಕಾಡುತ್ತದೆ.

೧೯ನೇ ಶತಮಾನದಲ್ಲಿ ಜರ್ಮನಿಯ ನಾಸಿಜಂ, ಇಟಲಿಯ ಪ್ಯಾಸಿಸಂ, ರಷ್ಯದ ಸ್ಟಾಲಿನಿಸಂಗಳು ಮಹಿಳೆಯರ ಬಗ್ಗೆ ಅಧ್ಯಯನ ಮಾಡಲು ದಾರಿಮಾಡಿಕೊಟ್ಟವು.[೫] ಆದರೆ ಅವುಗಳು ದಂಗೆ, ಗಲಭೆಗಳೆಂದು ಗುರುತಿಸಲ್ಪಟ್ಟವು. ಸಾಮಾಜಿಕ ಚಳುವಳಿಯ ಪರಿಕಲ್ಪನೆ ಅಧುನಿಕ ಸಮಾಜದ್ದಾದರೂ. ಅಧುನಿಕ ಪೂರ್ವದಲ್ಲಿ ಸಮಾಜದ ಕೆಲವು ಪುರುಷರು ಸಮಾಜಿಕ ಬದಲಾವಣೆಗೆ ಒಪ್ಪಿಕೊಂಡಿದ್ದರು. ಅವರಲ್ಲಿ ರಾಜಾರಾಂ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ, ಸ್ವಾಮಿ ದಯಾನಂದ ಸರಸ್ವತಿ ಮುಂತಾದವರ ಉನ್ನತ ವಿಚಾರಧಾರೆಗಳ ಮೂಲಕ ಮಹಿಳೆಯರ ಸಾಮಾಜಿಕ ಬದಲಾವಣೆಗೆ ಒತ್ತಡವನ್ನು ಸೃಷ್ಟಿಸಿದವು.

ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರ ಮೂಲಕ ಮಹಿಳಾ ಚಳುವಳಿಯ ಉದಯವನ್ನು ಗುರುತಿಸಬಹುದು. ಮಹಿಳೆಯರು ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದ್ದು ಗಾಂಧೀಜಿಯವರ ಕರೆಯಮೇರೆಗೆ. ವಿದೇಶಿಯರ ವಿಚಾರಗಳನ್ನು, ಆಳ್ವಿಕೆಯನ್ನು ಅಹಿಂಸಾತ್ಮಕ ನೆಲೆಯಿಂದ ಎದುರಿಸುವ ಆತ್ಮಸ್ಥೈರ್ಯ ಭಾರತೀಯ ಮಹಿಳೆಯರಲ್ಲಿದೆ ಎಂದು ಗುರುತಿಸಿದ ಗಾಂಧೀಜಿ, ಸತ್ಯಾಗ್ರಹ, ಅಸಹಕಾರ ಆಂದೋಲನದ ಮೂಲಕ ಬ್ರಿಟೀಷರ ವಿರುದ್ಧ ಹೋರಾಡಲು ನಿರ್ಧರಿಸಿದರು. ಎದುರಾಳಿಗಳ ಹಿಂಸೆಯ ಉದ್ದೇಶದ ವಿರುದ್ಧ ಅಹಿಂಸಾತ್ಮಕ ನೆಲೆಯಾದ ಉಪವಾಸ ಸತ್ಯಾಗ್ರಹದ ಮೂಲಕ ಎದುರಿಸುವ ಸಾಮರ್ಥ್ಯ ಮಹಿಳೆಯರಲ್ಲಿದೆ ಎಂದು ಮನಗಂಡ ಗಾಂಧೀಜಿಯವರು ಮಹಿಳೆಯರನ್ನು ರಾಷ್ಟ್ರೀಯ ಹೋರಾಟಕ್ಕೆ ಸೇರಲು ಹುರಿದುಂಬಿಸಿದರು. ಬ್ರಿಟೀಷರ ನೀತಿಯನ್ನು ವಿರೋಧಿಸಲು, ಬ್ರಿಟೀಷರ ವಸ್ತುಗಳ ಮೇಲೆ ಬಹಿಷ್ಕಾರ, ದೇಶಿಯ ಉಡುಗೆ-ತೊಡುಗೆ, ಖಾದಿ ಬಟ್ಟೆ ನೂಲುವಿಕೆಯಂತಹ ಚಳುವಳಿಗಳಲ್ಲಿ ಎಲ್ಲಾ ಮಹಿಳೆಯರು ಭಾಗವಹಿಸಿದರು.[೬]

ಬ್ರಿಟೀಷರ ವಿರುದ್ಧವಾದ ಹೊಸ ಜೀವನ ಕ್ರಮವನ್ನು ರೂಪಿಸುವುದಕ್ಕಾಗಿ ಮಾಡುವ ಪ್ರಯತ್ನ ಅಥವಾ ಕಾನೂನುಬದ್ಧವಾಗಿ ಆಗುತ್ತಿರುವ ಬದಲಾವಣೆಯನ್ನು ವಿರೋಧಿಸುವ ಕಾರ್ಯವನ್ನು ಮಹಿಳೆಯರು ಮಾಡತೊಡಗಿದರು. ಬ್ರಿಟೀಷರ ವಾಣಿಜ್ಯ ನೀತಿಯಿಂದಾಗಿ ಭಾರತದ ಪರಂಪರಾಗತ ವೃತ್ತಿಯಾದ ನೂಲುವುದು, ಬಟ್ಟೆ ವ್ಯಾಪಾರ, ಗಿರಣಿ ಉದ್ಯಮಗಳು ಅವನತಿ ಹೊಂದಿದ್ದವು. ಹೀಗಾಗಿ

ಪುರುಷರೊಂದಿಗೆ ಸಾವಿರಾರು ಮಹಿಳೆಯರು ಕೆಲಸ ಕಳೆದುಕೊಂಡಿದ್ದರಿಂದ, ಬ್ರಿಟೀಷರ ವಿರುದ್ಧ ಹೋರಾಡಲು ರಾಷ್ಟ್ರೀಯತೆಯೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಚರಕ ಸಂಕೇತವಾಯಿತು. ಅಹಿಂಸಾ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರನ್ನು ಗಾಂಧೀಜಿ ಹುರುದುಂಬಿಸಿದರು. ರಾಜಕೀಯ ಜ್ಞಾನ ಮಹಿಳೆಯರಲ್ಲಿ ಮೂಡಲು ರಾಷ್ಟ್ರೀಯ ಚಳುವಳಿ ಕಾರಣವಾಯಿತು.[೭] ಲಿಂಗಭೇದವಿಲ್ಲದೇ, ಜಾತಿ ಭೇದವಿಲ್ಲದೆ ಅಸಂಖ್ಯಾತ ಮಹಿಳೆಯರು ಭಾಗವಹಿಸಿದರು. ಮೆರವಣಿಗೆ ಹೋಗುವ, ಭಿತ್ತಿಪತ್ರ ಹಂಚುವ, ಉಪವಾಸ ಕೈಗೊಳ್ಳುವ ದೇಶಿಯರಿಗೆ ರಹಸ್ಯ ಸಂದೇಶ ಕಳಿಸುವ, ಹೋರಾಟಗಾರರಿಗೆ ಊಟ-ಬಟ್ಟೆ ಸರಬರಾಜು ಮಾಡುವ, ಬ್ರಿಟೀಷರ ಯುದ್ಧಕಲೆ ತಿಳಿಯುವ, ಯುವಕರಿಗೆ ಧೈರ್ಯ ಹುರುಪು ತುಂಬುವ ಕೆಲಸ ಮಾಡಿದರು. ಬ್ರಿಟೀಷರ ವಿರುದ್ಧ ಬೃಹತ್ ರ್‍ಯಾಲಿ ಮೆರವಣಿಗೆ ಮಾಡಿದರು. ಸಾವಿರಾರು ಮಹಿಳೆಯರು ಸೆರೆವಾಸ ಅನುಭವಿಸಿದರು. ಸರಳಾದೇವಿ ಚೌದುರಾಣಿ ಗರಡಿ ಮನೆ ಸ್ಥಾಪಿಸಿ, ಅಲ್ಲಿರುವ ಪುರುಷರನ್ನು ಹುರುದುಂಬಿಸಿದರು. ಲೇಖನ ಮೂಲಕ, ಕಾವ್ಯ ಮೂಲಕ ನಾಗರಿಕರಲ್ಲಿ ರಾಷ್ಟ್ರಪ್ರೇಮ ತುಂಬುತ್ತಿದ್ದರು. ಹೀಗೆ ಧೀರೋದತ್ತವಾಗಿ ಹೋರಾಡಿದ ಭಾರತೀಯ ಅಸಂಖ್ಯಾತ ಮಹಿಳೆಯರಲ್ಲಿ ಕೆಲವರನ್ನು ಮಾತ್ರ ಚರಿತ್ರೆಯಲ್ಲಿ ದಾಖಲಿಸಲಾಯಿತು. ಕಮಲಾದೇವಿ ಚಟ್ಟೋಪಾಧ್ಯಾಯ, ಡಾ.ಮುತ್ತುಲಕ್ಷ್ಮಿ ರೆಡ್ಡಿ, ರಾಜಕುಮಾರಿ ಅಮೃತ ಕೌರ, ಬೇಗಂ ಹಮೀದ ಅಲಿ, ಸರೋಜಿನಿ ನಾಯ್ಡು, ರಾಮೇಶ್ವರಿ ನೆಹರು, ಸರಳಾದೇವಿ ಚಾಧುರಾಣಿ ಹಾಗು ಹಂಸ ಮೆಹ್ತಾರಂತ ಮಹಿಳೆಯರು ಮುಂಚೂಣಿಯಲ್ಲಿದ್ದರು.

ಸರೋಜಿನಿ ನಾಯ್ಡು, ರಾಷ್ಟ್ರೀಯ ಸ್ತ್ರೀ-ಸಂಘ ಎಂಬ ಸ್ವತಂತ್ರ ಮಹಿಳಾ ಸಂಸ್ಥೆಯನ್ನು ಸ್ಥಾಪಿಸಿದರು. ಮಹಿಳೆಯರಿಗೆ ಹೋರಾಟದ ತರಬೇತಿ ಕೊಡುವುದು, ಅವರಲ್ಲಿನ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸುವುದು, ಮಹಿಳಾ ವಿಮೋಚನೆ ಹಾಗೂ ಸ್ವರಾಜ್ಯ ಸ್ಥಾಪನೆ ಇದರ ಮೂಲ ಉದ್ದೇಶವಾಗಿತ್ತು. ರಾಷ್ಟ್ರೀಯ ಹೋರಾಟದಲ್ಲಿ ನೇರವಾಗಿ ಭಾಗಿಯಾದ ಮಹಿಳೆಯರೂ ಇದ್ದರು. ಯುದ್ಧದ ಶಿಬಿರಗಳಿಗೆ ಹೋಗಿ ಗಾಯಾಳುಗಳಿಗೆ ಶುಶ್ರೂಷೆ ಮಾಡುವುದು, ಧೈರ್ಯ ತುಂಬುವ ಕಾರ್ಯ ಮಾಡುತ್ತಿದ್ದರು. ಸ್ತ್ರೀ ಶಿಕ್ಷಣಕ್ಕಾಗಿ ರೂಪಗೊಂಡಿದ್ದ ಥಿಯೋಸಫಿಕಲ್ ಸೊಸೈಟಿಯ ಮುಂದಾಳತ್ವ ವಹಿಸಿದ್ದ ಅನಿಬೆಸೆಂಟ್ 'ಭಾರತೀಯ ಮಹಿಳೆಯರಿಗೆ ಶಿಕ್ಷಣ ಅತ್ಯಗತ್ಯ' ಎಂದು ಸಾರಿದರು. ಶಿಕ್ಷಣ ಪಡೆದ ಮಹಿಳೆಗೆ ಉದ್ಯೋಗದ ಅವಕಾಶಗಳು ದೊರಕುತ್ತವೆ. ಅವಳು ಆರ್ಥಿಕವಾಗಿ ಸಬಲಳಾಗುತ್ತಾಳೆ. ಆರ್ಥಿಕ ಸಬಲತೆ ರಾಜಕೀಯ ಸಬಲೀಕರಣಕ್ಕೆ ದಾರಿ ಮಾಡಿಕೊಡುತ್ತವೆಂದರು. ಮಹಿಳೆಯರಲ್ಲಿ ರಾಜಕೀಯ ಹಕ್ಕಿನ ಜ್ಞಾನ ಬೆಳೆಸುವ ಕಾರ್ಯವನ್ನು ಸರಳಾದೇವಿ ಚೌಧುರಾಣಿ, ಮೆಡಮ್ ಬಕಾಜಿ, ಮೆಡಮ್ ಆನಿಬೆಸೆಂಟ್, ಕ್ಯಾಪ್ಟನ್ ಲಕ್ಷ್ಮಿ ಸೆಹಗಲ್ ಮಾಡುತ್ತಿದ್ದರು. ಸರಳಾದೇವಿ ಚೌಧುರಾಣಿ ಇಂಗ್ಲೀಷನಲ್ಲಿ ಬೀದಿನಾಟಕಗಳನ್ನು ಬರೆದರು. ಬೀದಿ ಸಭೆ, ಪೋಸ್ಟರ್ ಪ್ರದರ್ಶನ, ಬೀದಿನಾಟಕ,

ಚರ್ಚೆಗಳು ನಿರಂತರವಾಗಿ ನಡೆಯುತ್ತಿದ್ದವು. ಮಹಿಳೆಯರೆಲ್ಲ ಗುಪ್ತವಾಗಿ ಒಂದೆಡೆ ಸೇರಿ ಬ್ರಿಟೀಷರ ವಿರುದ್ಧ ತಂತ್ರ ರೂಪಿಸುತ್ತಿದ್ದರು. 'ಹಿಂದ್ ಸ್ವರಾಜ್' ಪ್ರತ್ರಿಕೆಯನ್ನು ಮನೆಮನೆಗೆ ಹೋಗಿ ಹಂಚುತ್ತಿದ್ದರು.

ಕ್ರಾಂತಿಕಾರಕ ಹೋರಾಟದಲ್ಲಿ ಭಾಗವಹಿಸಿದ್ದ ಮಹಿಳೆಯರ ಮುಂದಾಳತ್ವವನ್ನು ಬಂಗಾಳದ ಕಲ್ಪನಾದತ್ ವಹಿಸಿದ್ದರು. ಡೈನಮ್ಯೆಟ್ ಸಂಚಿನ ಬಳಕೆಗೆ ಬೇಕಾದ ಸ್ಫೋಟಕ ವಸ್ತುಗಳನ್ನು ತಯಾರಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದ ಕಲ್ಪನಾದತ್‌ರನ್ನು ಬಂಧಿಸಿ ಜೈಲು ಶಿಕ್ಷೆ ವಿಧಿಸಲಾಯಿತು. "ಆಜಾದ್ ಹಿಂದ್ ಫೌಜ್" ನ ಮಹಿಳಾ ಶಾಖೆಯನ್ನು ಝಾನ್ಸಿರಾಣಿ ಲಕ್ಷ್ಮಿಬಾಯಿಯ ಹೆಸರಿನಲ್ಲಿ ನೇತಾಜಿ ಸುಭಾಸ್ ಚಂದ್ರ ಬೋಸ್ ಸ್ಥಾಪಿಸಿದರು. ಮಹಿಳಾ ರೆಜಿಮೆಂಟನ ನಾಯಕಿಯಾಗಿ ಆಂಗ್ಲ ಪುರುಷರೊಂದಿಗೆ ಹೋರಾಡಿದ ಲಕ್ಷ್ಮಿಬಾಯಿ ಮೂರು ವಾರದೊಳಗೆ ೫೦೦ ಶಿಬಿರಗಳನ್ನು ಸ್ಥಾಪಿಸಿದರು.[೯] ಬರ್ಮಾದಲ್ಲಿ ಗೆರಿಲ್ಲಾ ಯುದ್ಧ ತರಬೇತಿ ಪಡೆದು ಭಾರತೀಯರಿಗೆ ತರಬೇತಿ ನೀಡಿದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿನ ಭಾಗವಹಿಸುವುಕೆ ಭಾರತೀಯ ಮಹಿಳೆಯರಿಗೆ ಧೈರ್ಯ, ರಾಜಕೀಯ ಜ್ಞಾನ, ಹಕ್ಕು-ಕರ್ತವ್ಯಗಳ ಪರಿಕಲ್ಪನೆ ಹಾಗೂ ಚಿಂತನೆಯನ್ನು ಹೆಚ್ಚಿಸಿತು. ೧೮೮೦ರ ಕೊನೆ ವರ್ಷಗಳಲ್ಲಿ ಆರಂಭಗೊಂಡ ಮಹಿಳಾ ಸಂಘಗಳು ೧೯೧೦ರ ವೇಳೆಗೆ ರಾಷ್ಟ್ರೀಯ ಮಹಿಳಾ ಸಂಘಟನೆಗಳಾಗಿ ತಲೆ ಎತ್ತಿದವು. ರಾಷ್ಟ್ರೀಯ ನೆಲೆಯಲ್ಲಿ ಭಾರತೀಯ ಸ್ತ್ರೀ ಎಂಬ ಪರಿಕಲ್ಪನೆ ರೂಪಿಸುವ ಮಹಿಳಾ ಸಂಘಟನೆಗಳು, ಸರಳಾದೇವಿ ಚೌಧುರಾಣಿ ಮತ್ತು ಲೇಡಿ ಬಾಲಚಂದ್ರರ ನೇತೃತ್ವದಲ್ಲಿ ಆರಂಭಗೊಂಡವು. ೧೯೧೦ರಲ್ಲಿ ಅಲಹಾಬಾದ್‌ನಲ್ಲಿ ನಡೆದ ಮೊದಲ ಭಾರತೀಯ ಮಹಿಳಾ ಮಂಡಲ ಸಭೆಯ ಕಾರ್ಯಕಲಾಪಗಳನ್ನು ರೂಪಿಸಿ, ಅವುಗಳ ಭೌತಿಕ ಹಾಗೂ ಸಾಂಸ್ಕೃತಿಕ ವಿಚಾರಗಳ ನೇತೃತ್ವವನ್ನು ಮಹಿಳೆಯರೇ ವಹಿಸಿದರು. ಈ ಸಮಯದಲ್ಲಿ ಸಾವಿರಾರು ಮಹಿಳೆಯರು ಬ್ರಿಟೀಷರ ದಾಸ್ಯವಿಮೋಚನೆ ಬಗ್ಗೆ ಚರ್ಚಿಸಹತ್ತಿದರು. ಕಾರ್ಲ್‌ಮಾರ್ಕ್ಸ್‌ನ ವಿಚಾರಧಾರೆಯ ಪುಸ್ತಕಗಳನ್ನು ಅಕ್ಷರಸ್ಥರು ಓದಿ, ಸಮಾಜ ವಾದದ ಕಲ್ಪನೆ ಬಗ್ಗೆ ಉಳಿದ ಮಹಿಳೆಯರಿಗೆ ತಿಳಿಸಹತ್ತಿದರು. ಸಮಾನ ಸಮಾಜದ ಕಾರ್ಲ್‌ಮಾರ್ಕ್ಸ್‌ನ ಕಲ್ಪನೆ ಅವರೊಳಗಿನ ರಾಜಕೀಯ ಹಕ್ಕಿನ ಪ್ರಶ್ನೆಯನ್ನು ಹೆಚ್ಚಿಸಿತು. ರಾಜಕೀಯ ಪ್ರಜ್ಞೆ ಮೂಡಿದ ಮಹಿಳೆಯರು ತಮ್ಮ ಬೇಡಿಕೆ ಮತ್ತು ಹಕ್ಕುಗಳ ಸಮರ್ಥನೆಗಾಗಿ ಹಲವಾರು ಸಂಘಟನೆಗಳನ್ನು ಕಟ್ಟಿಕೊಂಡರು.

೧೯೧೭ ರಲ್ಲಿ ಮಾರ್ಗರೇಟ್ ಕಸಿನ್ಸ್ ಮತ್ತು ಆ್ಯನಿಬೆಸೆಂಟ್ ಸೇರಿ "ಮಹಿಳೆಯರ ಭಾರತೀಯ ಸಂಘಟನೆ" (Women Indian Association) ಸ್ಥಾಪಿಸಿದರು.[೬] ಮಹಿಳೆಯರೆಲ್ಲಾ ಸೇರಿ ರಾಷ್ಟದ ಮಹಿಳಾ ಸದಸ್ಯತ್ವಕ್ಕೆ ಒತ್ತಾಯಿಸತೊಡಗಿದರು. ರಾಷ್ಟ್ರೀಯ ಹೋರಾಟದ ದಿನಗಳಲ್ಲಿ ತನ್ನೊಂದಿಗೆ ಗುರುತಿಸಿಕೊಂಡ ಮಹಿಳಾ ಚಳುವಳಿಗೆ ಭಾರತವು ಅಧಿಕೃತ ಒದಗಿಸುವ ಭರವಸೆ ನೀಡಿತು. ರಾಷ್ಟ್ರಿಯ ನಾಯಕಿಯರಾಗಿ ಬೆಳೆದ ಸರೋಜಿನಿ ನಾಯ್ಡು, ಆ್ಯನಿಬೆಸೆಂಟ್, ಕಮಲಾದೇವಿ ಚಟ್ಟೋಪಾಧ್ಯಾಯ ಮುಂತಾದವರು

ಮಹಿಳಾ ಮತದಾನದ ಹಕ್ಕಿಗಾಗಿ ಮನವಿ ಸಲ್ಲಿಸಿದರು. ಮತದಾನದ ಒತ್ತಾಯ ತರುವ ಸಮಯದಲ್ಲಿ ಆ್ಯನಿಬೆಸೆಂಟ್ Indian National Congress ನ ಅಧ್ಯಕ್ಷರಾಗಿ ಚುನಾಯಿತರಾಗಿದ್ದರು. ಕಾಂಗ್ರೆಸ್‌ನ ಪ್ರಧಾನ ಭಾಗವಾಗಿ ದುಡಿಯುತ್ತಿದ್ದ ಮಹಿಳೆಯರ ರಾಜಕೀಯ ಇಚ್ಛಾಶಕ್ತಿಯನ್ನು ಬ್ರಿಟೀಷ್ ಸರ್ಕರ ನೇರವಾಗಿ ಒಪ್ಪದೇ ಸ್ಥಳೀಯ ಪ್ರಾಂತೀಯ ಶಾಸನಸಭೆಗೆ (Individual Provincial Legislature) ಒಪ್ಪಿಸಿತು.[೧೦] ಬ್ರಿಟೀಷ್ ಸರ್ಕಾರದ ಪರ ಭಾರತಕ್ಕೆ ಬಂದಿದ್ದ ಸರ್ ಮಾಂಟೆಗ್ಯೂ ಜೇಮ್ಸ್‌ಫರ್ಡ್, ಭಾರತೀಯ ಮಹಿಳೆಯರ ಮೂಲಭೂತ ಹಕ್ಕಿನ ಬಗ್ಗೆ ನಿರ್ಣಯ ತೆಗೆದುಕೊಳ್ಳುವಲ್ಲಿ ಉತ್ಸುಕರಾಗಿದ್ದರೂ, ಭಾರತೀಯ ಶಾಸನಸಭೆಗೆ ನಿರ್ಧಾರ ತೆಗೆದುಕೊಳ್ಳುವಂತೆ ತಿಳಿಸಿದರು. ಇಂಗ್ಲೆಂಡಿನ ದುಂಡುಮೇಜಿನ ಪರಿಷತ್ತಿನ ಸಭೆಗೆ ಸರೋಜಿನಿ ನಾಯ್ಡು, ಡಾ. ಮುತ್ತುಲಕ್ಷ್ಮಿರೆಡ್ಡಿ ಮತ್ತು ರಾಮೇಶ್ವರಿ ನೆಹರುರವರು ಭಾರತದ ಪ್ರತಿನಿಧಿಗಳಾಗಿ ಸಭೆಯಲ್ಲಿ ಭಾಗವಹಿಸಿದಾಗ, ಅಲ್ಲಿ ನಡೆಯುತ್ತಿದ್ದ ಮಹಿಳೆಯರ ಮತದಾನದ ಹಕ್ಕಿನ ಚಳುವಳಿಯು ಅವರ ಮೇಲೆ ಗಾಢ ಪರಿಣಾಮ ಬೀರಿತ್ತು. ಇದರ ಫಲವಾಗಿ ಮ್ಯಾಂಟೆಗ್ಯೂ ಅವರಲ್ಲಿ ಭಾರತೀಯ ಮಹಿಳಾ ಮತದಾನದ ಹಕ್ಕಿನ ಬೇಡಿಕೆ ಇಟ್ಟಿದ್ದರು. ಪ್ರಾಂತೀಯ ಶಾಸನಸಭೆ ಭಾರತೀಯ ಮಹಿಳೆಯರ ಮತದಾನದ ಹಕ್ಕಿಗೆ ನಿರ್ಬಂಧ ಹಾಕಿತು. 'ವಿವಾಹಿತ ಭಾರತೀಯ ಸ್ತ್ರೀಗೆ ಮಾತ್ರ ಮತ ಚಲಾಯಿಸುವ ಹಕ್ಕಿರಬೇಕು' ಎಂಬ ಅಭಿಪ್ರಾಯವನ್ನು ಮಂಡಿಸಿದವು. ಇದನ್ನು ಮಹಿಳಾ ಚಳುವಳಿಯ ಮುಂದಾಳತ್ವದಲ್ಲಿ ಭಾರತೀಯ ಮಹಿಳೆಯರೆಲ್ಲಾ ವಿರೋಧಿಸಿದರು. ವಿವಾಹಕ್ಕೂ, ಮಹಿಳೆಯ ಮತದಾನಕ್ಕೂ ಯಾವುದೇ ರೀತಿಯ ಸಂಬಂಧವಿಲ್ಲ, ಇದು ಅವೈಜ್ಞಾನಿಕವಾದುದು. ಭಾರತದಲ್ಲಿ ಆ ವೇಳೆಯಲ್ಲಿ ಬಾಲ್ಯ ವಿವಾಹ ಪ್ರಚಲಿತದಲ್ಲಿತ್ತು. ಅಪ್ರಾಪ್ತ ವಯಸ್ಸಿನ ಹುಡುಗಿಯ ಚಿಂತನಾ ಶಕ್ತಿ ಪಕ್ವವಾಗಿರುವುದಿಲ್ಲ, ಬಾಲಕಿಯರಿಗೆ ಮತದಾನದ ಹಕ್ಕನ್ನು ನೀಡಲಾದಿತೆ? ಇದು ಪಿತೃ ಪ್ರಧಾನತೆಯ ಒಳ ಸಂಚು. ವಯಸ್ಕ ಮಹಿಳೆ ಅವಿವಾಹಿತಳಾಗಿದ್ದರೆ ಅವಳಿಗೆ ಮತದಾನದ ಹಕ್ಕಿಲ್ಲವೆ? ಎಂದೆಲ್ಲಾ ಮಹಿಳೆಯರು ವಾದಿಸಿದರು. ಮತದಾನದಲ್ಲಿ ಸ್ತ್ರೀ-ಪುರುಷರಿಬ್ಬರೂ ಸರಿಸಮಾನರು. ಮತದಾನ ಹಕ್ಕಿನ ಬಗ್ಗೆಯಿರುವ ತಾರತಮ್ಯ ನಿವಾರಣೆಯಾಗಬೇಕೆಂದರು. ಪುರುಷನ ಸಂದರ್ಭದಲ್ಲಿ ಗಣನೆಗೆ ಬಾರದ ವಿವಾಹವು ಮಹಿಳೆಯ ಸಂದರ್ಭದಲ್ಲಿ ಮುಖ್ಯವಾದುದನ್ನು ಪ್ರಜ್ಞಾವಂತ ಮಹಿಳೆಯರು ಪ್ರತಿಭಟಿಸಿದರು.

ಪುರುಷರ ಸಾಧನೆಗಳನ್ನು ಶ್ರೇಷ್ಠವಾಗಿರಿಸುತ್ತಾ, ಮಹಿಳೆಯರ ಸಾಧನೆಗಳನ್ನು ಗೌಣವಾಗಿರಿಸುವ ಸಂಪ್ರದಾಯ ನಮ್ಮ ಭಾರತೀಯ ಚರಿತ್ರೆಯ ಅಧ್ಯಯನದಲ್ಲಿ ಕಂಡುಬರುತ್ತದೆ. ಪುರುಷರಿಗೆ ಕಡ್ಡಾಯವಾಗಿರುವ ಮಾನದಂಡಗಳು ಮಹಿಳೆಯರಿಗೂ ಕಡ್ಡಾಯವಾಗಬೇಕು, ಲಿಂಗ ತಾರತಮ್ಯ ಮಾಡದೆ ಮಹಿಳೆಯರ ವ್ಯಕ್ತಿತ್ವದ ವಿಕಾಸಕ್ಕೆ ಸಹಾಯಕವಾಗುವ, ಆರ್ಥಿಕ, ಸಾಮಾಜಿಕ ಸಬಲೀಕರಣಕ್ಕೆ ಅನುವಾಗುವ ಮುಕ್ತ ಅವಕಾಶ ಕಲ್ಪಿಸುವ ಮಹಿಳಾ ಮತದಾನದ ಹಕ್ಕಿನ ಬೇಡಿಕೆ ಈಡೇರಿಸಬೇಕೆಂದರು.

೧೯೨೬ರಲ್ಲಿ ಪ್ರಾಂತೀಯ ಶಾಸನಸಭೆಯ ಸದಸ್ಯತ್ವವನ್ನು ಮಹಿಳೆಯರಿಗೆ ನೀಡಬೇಕೆಂದು ಸರ್ಕಾರ ನಿಯಮ ಮಾಡಿತು. ಮಹಿಳೆಯರಿಗಾಗಿ ಈ ಹೊಸ ಅವಕಾಶ ತೆರಿದುಕೊಂಡಿತು. ಇದರನ್ವಯ ಡಾ. ಮುತ್ತುಲಕ್ಷ್ಮಿರೆಡ್ಡಿಯವರನ್ನು ಮದ್ರಾಸ ಶಾಸಕಾಂಗಕ್ಕೆ ಉಪರಾಷ್ಟ್ರಪತಿಯನ್ನಾಗಿ ಮಾಡಲಾಯಿತು. ಹೀಗೆ ಶಾಸನಸಭೆಯ ಸದಸ್ಯತ್ವವನ್ನು ಪಡೆದ ಪ್ರಥಮ ಮಹಿಳೆ ಎನಿಸಿದಳು.[೧೧] ಮಹಿಳೆಯರಿಗೆ ಸಿಕ್ಕ ಪ್ರಾರಂಭಿಕ ಅವಕಾಶ ಇದೆನಿಸಿದರೂ, ಇದರ ಬೆಳವಣಿಗೆಯಾಗಿ ಮಹಿಳೆಯ ಆಸಕ್ತಿ, ಹಾಗೂ ಚಿಂತನೆಗಳಿಗೆ ಹೆಚ್ಚಿನ ಉತ್ಸಾಹ ದೊರಕಿತು. ಇದರಿಂದಾಗಿ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಮಹಿಳೆಯರ ಬೇಡಿಕೆಯಾದ ಮಹಿಳಾ ರಾಜಕೀಯ ಹಕ್ಕೋತ್ತಾಯಕ್ಕೆ ಹೆಚ್ಚಿನ ಮನ್ನಣೆ ದೊರಕಿತು. ಗಾಂಧೀಜಿಯೊಂದಿಗಿನ ಅಸಹಕಾರ ಚಳುವಳಿ, ಉಪವಾಸ ಸತ್ಯಾಗ್ರಹ, ದುಂಡುಮೇಜಿನ ಪರಿಷತ್ತಿನಲ್ಲಿ ಮಹಿಳೆಯರು ಭಾಗವಾಹಿಸಿದ್ದು ಮತದಾನದ ಹಕ್ಕಿಗೆ ಪ್ರೇರಣೆಯಾಗಿತ್ತು. ಸಂಘ-ಸಂಸ್ಥೆ ಸಮ್ಮೇಳನಗಳ ಮುಂದಾಳತ್ವವನ್ನು ಶಿಕ್ಷಿತ ಮಹಿಳೆಯರೆ ವಹಿಸಿದ್ದರು. ಅವರೆಲ್ಲಾ ಸೇರಿ ಮಹಿಳೆಯರಿಗೆ ಶಿಕ್ಷಣ ಅವಶ್ಯಕವೆಂದು ರಾತ್ರಿ ಶಾಲೆ (ಸಾಕ್ಷರತಾ ಶಾಲೆ) ತೆರೆದರು. ಹೆಚ್ಚೆಚ್ಚು ಮಹಿಳೆಯರು ಕುಟುಂಬದ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸುತ್ತ ಸಾಕ್ಷರತಾ ಶಾಲೆಗೆ ಪ್ರವೇಶಿಸಿದರು. ಮಹಿಳೆಯರಿಗೆ ಶಿಕ್ಷಣದ ಜೊತೆಗೆ ರಾಜಕೀಯ ಜ್ಞಾನ ನೀಡಲಾಯಿತು. ಮಹಿಳೆಯರ ಸುಧಾರಣೆಯನ್ನು ಸಹಿಸದ ಪುರುಷರು ಬಹಿರಂಗವಾಗಿ ಮಹಿಳೆಯರನ್ನು ಟೀಕಿಸತೊಡಗಿದರು. ಎಲ್ಲ ಕ್ಷೇತ್ರಗಳಿಗಿಂತ ಮುಖ್ಯವಾದುದು. ರಾಜಕೀಯ ಕ್ಷೇತ್ರ,ವಾದ್ದರಿಂದ ಈ ಮೂಲಕ ಪ್ರವೇಶಿಸುವ ಮಹಿಳೆ ಅಧಿಕಾರ ಕೇಂದ್ರಬಿಂದುವಾಗಿ ಸಮಾಜದ ಮುಖ್ಯವಾಹಿನಿಗೆ ಬರುತ್ತಾಳೆಂಬ ಭಯ ಅವರನ್ನು ಕಾಡತೊಡಗಿತು. ಯಾವ ಪುರುಷರು ಸ್ವಾತಂತ್ರ್ಯದಲ್ಲಿನ ಮಹಿಳಾ ಭಾಗವಹಿಸುವಿಕೆಯನ್ನು ಸ್ವಾಗತಿಸಿದ್ದರೋ, ಅವರೇ ಮಹಿಳೆಯರನ್ನು ಟೀಕಿಸಹತ್ತಿದರು. ಸ್ವಾತಂತ್ರ್ಯದಲ್ಲಿನ ಮಹಿಳಾ ಭಾಗವಹಿಸುವಿಕೆ ಉದ್ದೇಶ ರಾಷ್ಟ್ರಹಿತವಾಗಿತ್ತು. ತಮ್ಮ ಹಕ್ಕಿಗೆ, ಕ್ಷೇತ್ರಕ್ಕೆ ಧಕ್ಕೆ ಬರುತ್ತಿರಲಿಲ್ಲ ಎನ್ನುವ ವಾದ ಪ್ರಧಾನವಾಗಿತ್ತು. ಆದರೆ ಮಹಿಳಾ ಚಳುವಳಿಗಾರರ ಉದ್ದೇಶ ಮತದಾನ ಹಕ್ಕಿನ ಮೂಲಕ ರಾಜಕೀಯ ಪ್ರವೇಶಿಸುವುದಾಗಿತ್ತು. ಈ ಎಲ್ಲ ಒತ್ತಡಗಳ ನಡುವೆ ೧೯೩೭ ರ ಚುನಾವಣೆಯಲ್ಲಿ ಸಾವಿರಾರು ಮಹಿಳೆಯರು ಪಾಲ್ಗೊಂಡರು. ೧೯೪೨ ರಲ್ಲಿ ಅಖಿಲಭಾರತ ಕಾಂಗ್ರೆಸ್ ಮಹಿಳಾ ಶಾಖೆ ರಚಿತವಾಯಿತು.

ಮಹಿಳೆಯರ ರಾಜಕೀಯ ಆಸಕ್ತಿಯ ಪೂರಕವಾಗಿ ೧೯೪೬ ರಲ್ಲಿ ರಚಿತವಾದ ಭಾರತ ಸಂವಿಧಾನ ರಚನಾ ಸಮಿತಿಯು ೧೪ ಜನ ಮಹಿಳಾ ಸದಸ್ಯರನ್ನು ಒಳಗೊಂಡಿತು. ಸಂವಿಧಾನ ರಚನಾ ಸಭೆಯಲ್ಲಿ ಅಮ್ಮು ಸ್ವಾಮಿನಾಥನ್, ದಾಕ್ಷಾಯಿಣಿ ವೇಲಾಯುಧನ್, ದುರ್ಗಾಬಾಯಿ ದೇಶಮುಖ, ಹಂಸ ಮೆಹ್ತಾ, ಮಾಲತಿ ಚೌಧರಿ, ಸುಚೇತ ಕೃಪಲಾನಿ, ವಿಜಯಲಕ್ಷ್ಮೀ ಪಂಡಿತ್, ಪೂರ್ಣಿಮಾ ಬ್ಯಾನರ್ಜಿ, ಕಮಲಾ ಚಾದುರಾಣಿ, ಬೇಗಂ ಅಜೀಜ್, ರಸಲ್, ಸರೋಜಿನಿನಾಯ್ಡು, ಬೇಗಂ ಜಹನಾರ ನವಾಜ್, ಲೀಲಾರಾಯ್

ಮತ್ತು ಬೇಗಂ ಇಕ್ರಮುಲ್ಲಾಹ ಪಾಲ್ಗೊಂಡಿದ್ದರು. ಭಾರತದ ಸಂವಿಧನದ ಕಾಯ್ದೆ ರಾಷ್ಟ್ರದ ಮೂಲಭೂತ ಕಾಯ್ದೆಯಿನಿಸಿದೆ. ಜಗತ್ತಿನಲ್ಲಿಯೇ ದೀರ್ಘವಾದ ಲಿಖಿತ ಸಂವಿಧಾನವೆನಿಸಿದೆ.[೧೨] ಸಂವಿಧಾನದ ೧೪ ವಿಧಿಯಿಂದ ಲಿಂಗ ತಾರತಮ್ಯ ತೋರದೆ ಕಾನೂನಿನಲ್ಲಿ, ಸಾರ್ವಜನಿಕ ಕ್ಷೇತ್ರಗಳಲ್ಲಿ ಹಾಗೂ ಸರ್ಕಾರಿ ಸೇವೆಗಳಲ್ಲಿ ರಾಷ್ಟ್ರದ ಎಲ್ಲ ನಾಗರಿಕರನ್ನು ಸಮಾನವಾಗಿ ಕಾಣಬೇಕೆಂದು ಹೇಳುತ್ತದೆ. ಸಂವಿಧಾನದ ಅಡಿಯಲ್ಲಿರುವ ಲಿಂಗ ಸಮಾನತೆಯನ್ನು ಸಂವಿಧಾನದ ಕಡತದಲ್ಲಿ ಮಾತ್ರ ಕಾಣಬಹುದು.

ಸ್ವಾತಂತ್ರ್ಯದ ನಂತರ ನಡೆದ ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳು ಕೇವಲ ಪುರುಷರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡಿದವು. ಸ್ವಾತಂತ್ರ್ಯದ ಸಮಯದಲ್ಲಿನ ಮಹಿಳೆಯರ ಹೋರಾಟ, ಚಿಂತನಾಶೀಲತೆ, ಸ್ವಾತಂತ್ರ್ಯ ನಂತರ ನೇಪಥ್ಯಕ್ಕೆ ಸರಿದವು. ಪುರುಷ ಪ್ರಧಾನತೆ ಪ್ರಾಭಲ್ಯ ಪಡೆಯುತ್ತಲೇ ಮಹಿಳೆಯರು ಕಡೆಗಣಿಸಲ್ಪಟ್ಟರು. ಕಾನೂನಿನ ಮೂಲಕ ಮಹಿಳೆಯರು ಹಕ್ಕುಗಳನ್ನು ಪಡೆದರೆ ಲಿಂಗ ಸಮಾನತೆಯತ್ತ ವಾಲುತ್ತಾರೆಂದು, ಇದು ಸಾಂಪ್ರದಾಯಕ ಮೌಲ್ಯಗಳಿಗೆ ವಿರುದ್ಧವಾಗುತ್ತದೆಂದು ಭಾವಿಸಿದರು. ಮಹಿಳೆಯರಿಗೆ ಅವಕಾಶ ನೀಡಿದರೆ, ಸಂಪೂರ್ಣವಾಗಿ ಅವರು ರಾಜಕಾರಣದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ, ಅಧಿಕಾರ ಕೇಂದ್ರಕ್ಕೆ ಬರುತ್ತಾರೆ, ಪರಿಣಾಮವಾಗಿ ತಾವು ಅಧಿಕಾರದ ಅವಕಾಶದಿಂದ ವಂಚಿತರಾಗಬಹುದೆಂದು ತಿಳಿದರು. ಪ್ರಥಮ ಚುನಾವಣೆಯಲ್ಲಿ ಮಹಿಳಾ ಅಭ್ಯರ್ಥಿಗಳು ಶೇಕಡ ೪.೪ ಇದ್ದರೆ ೧೯೯೪ ಅಲ್ಲಿ ಹೆಚ್ಚು ಅಂದರೆ ಶೇ. ೮.೯ ರಷ್ಟು ಮಹಿಳಾ ಸದಸ್ಯರಿದ್ದರು. ೧೯೭೫ ರ ವರ್ಷವನ್ನು 'ಅಂತಾರಾಷ್ಟ್ರೀಯ ಮಹಿಳಾ ವರ್ಷ' ವಾಗಿ ವಿಶ್ವಸಂಸ್ಥೆ ಘೋಷಿಸಿದ ನಂತರ ಜಗತ್ತಿನ ಎಲ್ಲಾ ರಾಷ್ಟ್ರಗಳ ಮಹಿಳೆಯರಿಗೆ ಸಂಬಂಧಿಸಿದ ವರದಿ ತಯಾರಿಸಿತು.

೧೯೭೪ ರಲ್ಲಿ ೯ ಜನ ಮಹಿಳೆಯರನ್ನು ಹೊಂದಿದ ಪರಿಶೀಲನಾ ಸಮಿತಿ ೪೮೦ ಪುಟಗಳ ಧೀರ್ಘ ವರದಿ ತಯಾರಿಸಿತು. ಸಮಾನತೆಯೆಡೆಗೆ ಎಂಬ ಈ ವರದಿಯಲ್ಲಿ ಭಾರತೀಯ ಮಹಿಳೆಗೆ ಸಿಗಬೇಕಾದ ಸ್ಥಾನಮಾನ, ಅವಕಾಶಗಳು, ಕಾನೂನು ಬೆಂಬಲ, ಹಕ್ಕುಗಳು ಶೈಕ್ಷಣಿಕ ಅಭಿವೃದ್ಧಿ, ರಾಜಕೀಯ ಸ್ಥಾನಮಾನ, ಮಹಿಳೆಯರ ಕ್ಷೇಮಾಭಿವೃದ್ಧಿಗೆ ಕಾರ್ಯಕ್ರಮಗಳನ್ನು ಹಮ್ಮಿಕೊಳಬೇಕೆಂದು ತಿಳಿಸಲಾಗಿತ್ತು. ಇದಕ್ಕನುಗುಣವಾಗಿ ಮಹಿಳೆಯರ ಶಿಕ್ಷಣ ಪ್ರಗತಿ, ಕುಟುಂಬ ಯೋಜನಾ ಕಾರ್ಯಗಳು, ಗ್ರಾಮೀಣ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳ ಕುರಿತು ವರದಿ ತಯಾರಿಸಲು ರಾಜನೀತಿ ಶಾಸ್ತ್ರಜ್ಞರು, ವಕೀಲರು, ಪತ್ರಿಕೋದ್ಯಮಿಗಳು, ವೈದ್ಯರು, ಮಹಿಳಾ ಸಂಘಟನೆಗಳ ಪ್ರತಿನಿಧಿಗಳು, ಸರ್ಕಾರಿ ಅಧಿಕಾರಿಗಳು, ಕಾರ್ಮಿಕರು ಮತ್ತು ಸಮಾಜ ಸೇವಾ ಕಾರ್ಯಕರ್ತರು ಆಹ್ವಾನಿತರಾಗಿದ್ದರು. ಅವರೆಲ್ಲ ಭಾರತದ ಮಹಿಳೆಯರ ಸ್ಥಿತಿಗತಿ ಕುರಿತು ಚರ್ಚಿಸಿದರು. ಮಹಿಳೆಯರ ಅಭಿವೃದ್ಧಿಗಾಗಿ ರಚಿಸಿದ, ಯೋಜಿಸಿದ ಪಂಚವಾರ್ಷಿಕ ಯೋಜನೆಗಳು, ಅಭಿವೃದ್ಧಿ ಕಾರ್ಯಕ್ರಮಗಳು ಬಹುಸಂಖ್ಯಾತ ಭಾರತೀಯ

ಮಹಿಳೆಯರಲ್ಲಿ ಯಾವುದೇ ರೀತಿಯ ಬದಲಾವಣೆ ತಂದಿಲ್ಲ, ಇವುಗಳು ಮಹಿಳೆಯರನ್ನು ತಲುಪುತ್ತಿಲ್ಲ, ಎಂದು ವರದಿ ಸ್ಪಷ್ಟಪಡಿಸಿತು. ಭಾರತೀಯ ಮಹಿಳೆಯರ ಅತ್ಯಲ್ಪ ಪ್ರಾತಿನಿಧ್ಯವನ್ನು ಪ್ರಸ್ತಾಪಿಸುತ್ತ, ಮಹಿಳೆಯರಿಗೆ ವಿಶೇಷ ಸೌಲಭ್ಯ ನೀಡುವುದರ ಮುಖಾಂತರ ಅವರ ಜೀವನದಲ್ಲಿ ಬದಲಾವಣೆ ತರಬಹುದೆಂದು ಹೇಳಿತು. 'ಆರ್ಥಿಕವಾಗಿ ಸಬಲಳಾದ ಮಹಿಳೆ ಜೀವನದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಾಗಿರಬಹುದು, ಆದರೆ ಭಾರತೀಯ ಬಹುಮಹಿಳೆಯರು ಸಾರ್ವಜನಿಕ ಕ್ಷೇತ್ರಗಳಲ್ಲಿ ತಮ್ಮ ಕಾರ್ಯಕ್ಷಮತೆ ತೋರಿಸುವಂತಹ ಅವಕಾಶ ಅವರಿಗೆ ದೊರೆಯುತ್ತಿಲ್ಲ. ರಾಷ್ಟ್ರದ ಅಧಿಕಾರ ಕೇಂದ್ರದಲ್ಲಿ ಭಾಗವಹಿಸುವ ಮಹಿಳೆ ಮಾತ್ರ ಪುರುಷ ಪ್ರಧಾನ ಮೌಲ್ಯಗಳನ್ನು ಪ್ರಶ್ನಿಸಬಲ್ಲಳು, ಬದಲಿಸಬಲ್ಲಳು ಈ ಮೂಲಕ ರಾಜಕೀಯ ಪ್ರಕ್ರಿಯೆಯಲ್ಲಿ ಮಹಿಳೆ ಸಕ್ರಿಯವಾಗಿ ಭಾಗವಹಿಸಲು ಅವಕಾಶ ನೀಡಬೇಕೆಂದು ವಾದಿಸಿದರು. ಈ ವಿಷಯದ ಮೇಲೆ ಚರ್ಚೆಗಳಾಗಿ ಅಂತಿಮವಾಗಿ ಸಮಿತಿಯು 'ಗ್ರಾಮಮಟ್ಟದಲ್ಲಿ ಶಾಸನಬದ್ಧ ಪ್ರತ್ಯೇಕ ಮಹಿಳಾ ಪಂಚಾಯತಿಗಳನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿತು. ಮಹಿಳಾ ಸಶಕ್ತೀಕರಣದ ಪರಿಕಲ್ಪನೆ, ರಾಜಕೀಯ ಕ್ಷೇತ್ರದಿಂದಲೇ ಪ್ರಾರಂಭವಾಗಬೇಕೆಂಬ ಗಂಭೀರ ಆಲೋಚನೆಯೊಂದಿಗೆ, ಮಹಿಳಾ ಸಶಕ್ತೀಕರಣದ ಹೆಜ್ಜೆಗಳನ್ನು ಹುಡುಕಲು ಅಡೆತಡೆಯಾಗುವ ವಿಷಯಗಳನ್ನು ಚರ್ಚಿಸಲಾಯಿತು. ಗ್ರಾಮಮಟ್ಟದಿಂದ ಕೇಂದ್ರ ಮಟ್ಟದವರೆಗಿನ ಅಧಿಕಾರ ಕೇಂದ್ರದಲ್ಲಿ ಪ್ರಧಾನ ಬಿಂದುವಾಗಿ ಮಹಿಳೆಯನ್ನು ಪ್ರತಿನಿಧೀಕರಿಸಬೇಕು ಎಂದು ತೀರ್ಮಾನಿಸಿದರು.

ರಾಷ್ಟ್ರದ ತಳಮಟ್ಟದಲ್ಲಿರುವ ಗ್ರಾಮೀಣ ಮಹಿಳೆಗೆ ರಾಜಕೀಯ ಆಸಕ್ತಿಯಿದೆ. ಆದರೆ ಅವಕಾಶವಿಲ್ಲದ್ದರಿಂದ ಗ್ರಾಮದಲ್ಲಿರುವ ಮಹಿಳೆಯರನ್ನು ಸಬಲೀಕರಣಗೊಳಿಸಲು ರಾಜಕೀಯ ಅವಕಾಶ ಕೊಡಬೇಕು. ಗ್ರಾಮದಲ್ಲಿರುವ ಮಹಿಳೆ ರಾಜಕೀಯ ನೆಲೆಯಲ್ಲಿ ಗುರುತಿಸಬೇಕು. ಶೋಷಿತರಾದ ಸಮಾಜದ ಅಂಚಿನಲ್ಲಿರುವ ಮಹಿಳೆಯ ಕಿತ್ತುಕೊಂಡ ಹಕ್ಕುಗಳನ್ನು ಹಿಂದಿರುಗಿರುಹಿಸುವ, ಆರ್ಥಿಕ, ಸಾಮಾಜಿಕವಾಗಿ ಸಬಲರಾಗುವಂತಹ ಅವಕಾಶಗಳನ್ನು ನೀಡುವಂತಾಗಬೇಕು. ಅಸಮಾನ ನೆಲೆಯಲ್ಲಿರುವ ದುರ್ಬಲ ಮಹಿಳೆಗೆ ಹಕ್ಕು-ಸಮಾನ ಅವಕಾಶ, ನೀಡುವ ಮೂಲಕ ಸಮಾಜದ ಮುಖ್ಯವಾಹಿನಿಗೆ ತರಬೇಕು. ಈ ಮೂಲ ಉದ್ದೇಶವನ್ನಿಟ್ಟುಕೊಂಡು ಗ್ರಾಮೀಣ ಮಟ್ಟದಿಂದ ಕೇಂದ್ರಮಟ್ಟದರೆಗೆ ಮಹಿಳೆಗೆ ರಾಜಕೀಯ ಅವಕಾಶ ಕೊಡುವ ಕಾಯ್ದೆ ರೂಪಿತವಾಗಬೇಕು. ಕಾಯ್ದೆಯಲ್ಲಿ ಸಮಾನತೆಯಿರದಿದ್ದರೆ ಪುರುಷರು ಮತ್ತೆ ಪ್ರಭಲರಾಗಿ ಮಹಿಳೆಯರ ಹಕ್ಕು-ಸ್ವಾತಂತ್ರ್ಯಗಳನ್ನು ಕಿತ್ತುಕೊಳ್ಳುತ್ತಾರೆ.

ಮಹಿಳೆಯರ ರಾಜಕೀಯ ಪ್ರವೇಶದಿಂದಾಗಿ ರಾಜಕಾರಣದ ಪುರುಷಶಾಹಿ ಮನೋಭಾವ, ಭ್ರಷ್ಟಾಚಾರ, ಗುಂಪುಗಾರಿಕೆ ಜೊತೆಗೆ ರಾಜಕೀಯ ಬಗೆಗಿರುವ ಕೆಟ್ಟ ವ್ಯಾಖ್ಯಾನ ಬದಲಿಸಬಹುದುದೆಂಬುದು

ಮಹಿಳೆಯರ ವಾದವಾಗಿದ್ದರೆ, ಯಾವುದೇ ರಾಜಕೀಯ ತರಬೇತಿಯಿಲ್ಲದ ಮಹಿಳೆ ಈ ಅವಕಾಶಗಳನ್ನು ಸರಿಯಾಗಿ ಬಳಸಿಕೊಳ್ಳಲಾರಳು. ಮಹಿಳೆಯನ್ನು ಮುಂದಿಟ್ಟುಕೊಂಡು ರಾಜಕೀಯ ಪಕ್ಷಗಳು ಕುಟುಂಬ, ಜಾತಿ, ವರ್ಗಗಳು ಕಾರ್ಯ ರೂಪಿಸುತ್ತವೆ. ಇದು ಮಹಿಳೆಗೆ ಯಾವುದೇ ಪ್ರಗತಿ ತರಲಾರದು. ಕೆಟ್ಟ ರಾಜಕಾರಣದಲ್ಲಿ ಸಿಲುಕಿ ಒಳ್ಳೆ ಮಹಿಳೆಯೂ ಕೆಟ್ಟದಾಗಿ ಪ್ರತಿನಿಧೀಕರಿಸಲ್ಪಡುತ್ತಾಳೆ ಎಂದು ಪುರುಷರು ವಾದಿಸತೊಡಗಿದರು. ಮಹಿಳೆಯರ ರಾಜಕೀಯ ಪಾಲ್ಗೊಳ್ಳುವಿಕೆಯನ್ನು ಪ್ರೋತ್ಸಾಹಿಸದ, ಸಹಿಸದ ಪಿತೃ ಪ್ರಧಾನ ವ್ಯವಸ್ಥೆ ಮಹಿಳೆಯರ ಮೇಲೆ ಈ ರೀತಿಯ ಆರೋಪ ಮಾಡಿತು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾರತೀಯ ಮಹಿಳೆಯರು ಯಾವ ರಾಜಕೀಯ ತರಬೇತಿ, ಅಕ್ಷರ ಜ್ಞಾನವಿಲ್ಲದೆ ಭಾಗವಹಿಸಿದ್ದರು, ಮಹಿಳೆಯರು ರಾಜಕೀಯ ಇಚ್ಛಾಶಕ್ತಿ, ಧೈರ್ಯ, ಸಂಘಟನಾ ಶಕ್ತಿ ಹಾಗೂ ವಿಚಾರಪೂರ್ಣ ಚಿಂತನಗಳನ್ನು ಎತ್ತಿಹಿಡಿದಿದ್ದ ಸ್ವತಂತ್ರ್ಯ ಪೂರ್ವ ಭಾರತವು ಸ್ವಾತಂತ್ರ್ಯ ನಂತರ ಸ್ತ್ರೀಗೆ ರಾಜಕೀಯ ತರಬೇತಿ ಅವಶ್ಯಕವೆಂದಿತು. ಪುರುಷನಿಗಿಲ್ಲದ ಕಟ್ಟುಪಾಡುಗಳು, ನಿರ್ಬಂಧಗಳು ಮಹಿಳೆಯರಿಗೇಕೆ? ಶಿಕ್ಷಣ ಪಡೆಯದ ಸಾವಿರಾರು ಸ್ತ್ರೀ-ಪುರುಷರು ಯುದ್ಧ ನೀತಿ ರೂಪಿಸಿದ್ದರು. ಮತದಾನದ ಹಂತದವರೆಗೆ ಪುರುಷನಷ್ಟೆ ಪ್ರಾಧಾನ್ಯತೆ ಪಡೆದಿದ್ದ ಮಹಿಳೆಯರು, ನಂತರದಲ್ಲಿ ನೇಪಥ್ಯಕ್ಕೆ ಸರಿಸಲ್ಪಟ್ಟರು. ಮಹಿಳೆಯರಿಗೆ ರಾಜಕೀಯ ಆಸಕ್ತಿ, ಅರ್ಹತೆ ಇಲ್ಲವೆಂದಲ್ಲ. ಅರ್ಹತೆ, ಆಸಕ್ತಿ ಹೊಂದಿದವರೂ ಪುರುಷ ಪ್ರಧಾನ ಮೌಲ್ಯಗಳ ರಾಜಕೀಯದಲ್ಲಿ ಎರಡನೇಯ ಪ್ರಜೆಯಾಗಿ ಪ್ರತಿನಿಧಿಕರಿಸಲ್ಪಟ್ಟರು.

ಮಹಿಳಾ ಚಳುವಳಿಗಳ ರಾಜಕೀಯ ಹಕ್ಕಿಗೆ ನಿಖರವಾದ ಗುರಿಯನ್ನು ೧೯೯೫ ರ ಬೀಜಿಂಗ್ ಸಮ್ಮೇಳನ ಒದಗಿಸಿತು. ಮಹಿಳಾ ಸಬಲೀಕರಣದ ಸಾಕಾರವು ರಾಜಕಾರಣದಿಂದಲೇ ಆಗಬೇಕಿದೆ ಎಂಬ ನಿಲುವನ್ನು ತಳೆಯಲಾಯಿತು. ಗ್ರಾಮಮಟ್ಟದಿಂದ - ವಿಧಾನಸಭೆ, ಲೋಕಸಭೆಗಳ ಹಂತಗಳಲ್ಲಿ ಮಹಿಳೆ ಪ್ರವೇಶಿಸುವುದರಿಂದ ತನ್ನ ಹಿತಾಸಕ್ತಿಯನ್ನು ಬೆಳಸಬಹುದೆಂಬ ನಿಲುವು ತಾಳಲಾಯಿತು. ಆ ವೇಳೆಗೆ ಮತದಾನದ ದೊಡ್ಡ ಗುಂಪಾಗಿ ಮಹಿಳೆಯರನ್ನು ಕಂಡುಕೊಂಡ ರಾಜಕೀಯ ಪಕ್ಷಗಳು ಅವರ ಒಲವುಗಳಿಸಲು ಪೈಪೋಟಿಗಿಳಿದವು. ಜೊತೆಗೆ ಬೌದ್ಧಿಕವಾಗಿ ಹಾಗೂ ಶೈಕ್ಷಣಿಕವಾಗಿ ಬೆಳೆಯುತ್ತಿರುವ ಮಹಿಳೆಯರನ್ನು ವಿರೋಧಿಸುವುದು ಹಿಂದಿನಷ್ಟು ಸುಲಭವಾಗಿಲ್ಲ ಎಂಬ ಹೊಸ ಅರಿವು ರಾಜಕೀಯದಲ್ಲಿ ಮೂಡಿ ಮಹಿಳೆಯ ರಾಜಕೀಯ ಸಬಲೀಕರಣಕ್ಕಾಗಿ ಒಪ್ಪಿಗೆ ನೀಡಿದವು. ವಾಸ್ತವದಲ್ಲಿ ಪುರುಷ ರಾಜಕಾರಣಿಗಳು ಮಹಿಳೆಯರನ್ನು 'ವೋಟ್ ಬ್ಯಾಂಕ್'ಗಳಾಗಿ ಪರಿಗಣಿಸಿದರು.

ಮಹಿಳಾ ಚಳುವಳಿಯ ಪ್ರಾರಂಭದಲ್ಲಿ ಮಹಿಳೆಯರ ರಾಷ್ಟ್ರೀಯ ಚಳುವಳಿಯು ಸಾಮೂಹಿಕ ಹೋರಾಟವಾಗಿದ್ದು, ದೇಶದ ದಾಸ್ಯವನ್ನು ಬಿಡಿಸುವ ಗುರಿ ಹೊಂದಿತ್ತು. ನಂತರದಲ್ಲಿ ಸರ್ಕಾರದ ಯೋಜನೆಗಳು, ಸುಧಾರಣಾ ಕಾರ್ಯಕ್ರಮಗಳು ಪುರುಷ ಕೇಂದ್ರಿತವಾಗಿರುವುದನ್ನು ಮಹಿಳೆಯರು ವಿರೋಧಿಸಿದರು. ನಂತರದಲ್ಲಿ ಮಹಿಳೆಯರು ಆಡಳಿತ ಅಧಿಕಾರ ಬೇಡಿಕೆ ಮಂಡಿಸುವ, ಕಾರ್ಯರೂಪಕ್ಕೆ ತರುವ ಪ್ರಕ್ರಿಯೆಯಲ್ಲಿ ಭಾಗವಹಿಸಿದರು. ಇದೆಲ್ಲದರ ಪರಿಣಾಮವಾಗಿ ಸ್ಥಳೀಯ ಆಡಳಿತ ಸಂಸ್ಥೆಗಳಲ್ಲಿ ಸಂವಿಧಾನದ ನಿರ್ದೇಶನದಂತೆ ಪರಿಶಿಷ್ಠ ಜಾತಿ, ಪರಿಶಿಷ್ಠ ಬುಡಕಟ್ಟುಗಳಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡುವ, ಅವರಿಗೆ ರಾಜಕೀಯ ಹಕ್ಕುಗಳನ್ನು ನೀಡುವದಕ್ಕಾಗಿ ಮಹಿಳಾ ಮೀಸಲಾತಿಯನ್ನು ೧೯೯೨ ರಲ್ಲಿ ಪಾಸು ಮಾಡಲಾಯಿತು. ಅಂಚಿನಲ್ಲಿರುವ ಮಹಿಳೆ ಅಧಿಕಾರ ಕೇಂದ್ರದ ಮುಖ್ಯವಾಹಿನಿಗೆ ಬರುವದಕ್ಕಾಗಿ ಅವರಿಗೆ ವಿಶೇಷವಾಗಿ ಕಲ್ಪಿಸುವ ರಾಜಕೀಯ ಅಧಿಕಾರ 'ಮೀಸಲಾತಿ' ಹೆಸರಿನಲ್ಲಿ ಜಾರಿಗೆ ಬಂದಿತು. 'ಮಹಿಳಾ ಮೀಸಲಾತಿ'. ಗ್ರಾಮೀಣ ಹಾಗೂ ಹಿಂದುಳಿದ ಮಹಿಳೆಯರ ಜೀವನದಲ್ಲಿ ಯಾವ ಬದಲಾವಣೆ ತಂದಿದೆ? ಮಹಿಳೆಯ ರಾಜಕೀಯ ಭಾಗವಹಿಸುವಿಕೆ ಅವಳನ್ನು ಸಾಮಾಜಿಕ, ಆರ್ಥಿಕವಾಗಿ ಸಬಲಳನ್ನಾಗಿ ಮಾಡಿದೆಯಾ? ಎಂಬುವದನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಅಭ್ಯಸಿಸಲಾಗಿದೆ.

**ಉಲ್ಲೇಖಗಳು: –**


೧) ವೆಂಕಟೇಶ.ಎ, ೨೦೦೩, 'ನಗರ ಮತ್ತು ಗ್ರಾಮೀಣ ರಾಜಕೀಯದಲ್ಲಿ ಮಹಿಳೆ' ಪುಟ. ೧೨.
೨) ಡಾ. ಹೇಮಲತಾ. ಹೆಚ್.ಎಂ. ೨೦೦೪, 'ರಾಜಕೀಯ ಮತ್ತು ಅಭಿವೃದ್ಧಿ ಪ್ರಕ್ರಿಯೆಗಳಲ್ಲಿ ಮಹಿಳೆಯರು' ಪುಟ. ೧೬.
೩) ಮೀನಾಕ್ಷಿ. ಡಿ, ೨೦೦೨, 'ಗ್ರಾಮ ಪಂಚಾಯಿತಿಯಲ್ಲಿ ಮಹಿಳೆಯ ಪಾತ್ರ' ಪುಟ. ೨೦.
೪) ಡಾ. ಎಂ. ಉಷಾ, ೨೦೦೪, 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' ಪುಟ. ೧.
೫) ಪ್ರೀತಿ ಶುಭಚಂದ್ರ, ೨೦೦೨, 'ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು' ಪುಟ. ೨೩೪.
೬) ಹೇಮಲತಾ. ಹೆಚ್.ಎಂ. ೨೦೦೪, 'ರಾಜಕೀಯ ಪ್ರಕ್ರಿಯೆಗಳಲ್ಲಿ ಮಹಿಳೆಯರು' ಪುಟ. ೧೭
೭) ಗಾಯತ್ರಿ. ಎನ್, ೧೯೯೮, 'ಮಹಿಳಾ ಚಳುವಳಿಯ ಮಜಲುಗಳು' ಪುಟ. ೭೯.
೮) ಒಡೆಯರ್ ಹೆಗ್ಗಡೆ, ೨೦೦೩, 'ಆರ್ಥಿಕ ನೆಲೆಗಳು ಮತ್ತು ಆಯಾಮಗಳು' ಪುಟ. ೪೪
೯) ಗಾಯತ್ರಿ. ಎನ್, ೧೯೯೮, 'ಮಹಿಳಾ ಚಳುವಳಿಯ ಮಜಲುಗಳು' ಪುಟ. ೭೦.
೧೦) ಉಷಾ. ಎಂ, ೨೦೦೪ 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' ಪುಟ. ೧೦೯.
೧೧) ಎಂ. ಎಸ್. ಪಾಟೀಲ್, ೧೯೯೨, 'ಭಾರತ ಸಂವಿಧಾನ ಮತ್ತು ಸರ್ಕಾರಗಳು' ಪುಟ. ೧೦೭.
೧೨) ಶಮಂತ, ೨೦೦೧, 'ರಾಜಕೀಯ ಕ್ಷೇತ್ರ ಮತ್ತು ಮಹಿಳೆ' ಪುಟ. ೭೪

ಸ್ವಾತಂತ್ರ್ಯದ ನಂತರದಲ್ಲಿ ಸಂವಿಧಾನವು ಸಮಾನತೆಯ ಮೌಲ್ಯವನ್ನು ಲಿಂಗಭೇಧವಿಲ್ಲದೆ ರೂಪಿಸಿ, ಸ್ತ್ರೀಯ ಆರ್ಥಿಕ ಸಮಾನತೆಯ, ಸ್ವಾವಲಂಬನೆಯ ಅಧಿಕಾರ, ಹಕ್ಕಿನ ಪ್ರಶ್ನೆಯನ್ನು ಮರುಚಿಂತನೆಗೆ ಒಳಪಡಿಸಲಾಯಿತು. ಮಹಿಳೆಯರು ಪ್ರಜಾಪ್ರಭುತ್ವ ಚೌಕಟ್ಟಿನಲ್ಲಿ ತಮ್ಮ ಅವಕಾಶಗಳನ್ನು ತಾವೇ ಪಡೆಯುವದಕ್ಕಾಗಿ ಸರ್ಕಾರ ಮಹಿಳೆಯರಿಗೆ ವಿಶೇಷವಾದ ಜ್ಞಾನ ನೀಡಬೇಕೆಂಬುದು ಸಂವಿಧಾನದ ನಿಲುವಾಗಿದೆ. ಸರ್ಕಾರ ಮತ್ತು ಅದರ ಕಾರ್ಯಗಳನ್ನು, ಅಧಿಕಾರಗಳನ್ನು ರಾಷ್ಟ್ರ ಜೀವನದ ಗುರಿಗಳನ್ನು ಮುಟ್ಟಲು ಜನಾಧರಣೀಯ ಆಧಾರದ ಮೇಲೆ ರಚಿತವಾದ ಸಂಸ್ಥೆಗಳಲ್ಲಿ ಸ್ಥಳೀಯ ಸರ್ಕಾರ ಒಂದಾಯಿತು. ರಾಷ್ಟ್ರದ ಅಧಿಕಾರಗಳೆಲ್ಲ ರಾಷ್ಟ್ರ-ರಾಜ್ಯ-ಸ್ಥಳೀಯ ಸರ್ಕಾರಗಳಲ್ಲಿ ವಿಕೇಂದ್ರಿಕರಣ ಪದ್ಧತಿಯಿಂದ ಅಧಿಕಾರ ಕೊಡುವ ಮೂಲಕ ಅವರನ್ನು ಸಬಲರನ್ನಾಗಿ ಮಾಡಲು 'ಮೀಸಲಾತಿ' ವ್ಯವಸ್ಥೆಯನ್ನು ರೂಪಿಸಲಾಯಿತು.[೧]

ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ತಾತ್ವಿಕ ಮೂಲ ಸೆಲೆ ಸರ್ವೋದಯ. ಗಾಂಧೀಜಿಯವರ ಸರ್ವೋದಯದ ಕಲ್ಪನೆಯಲ್ಲಿ ಸಮಾಜದ ಪ್ರತಿಯೊಬ್ಬ ಪ್ರಜೆ ಕೂಡ ಸೇವಕ ಹಾಗೂ ಸರ್ವಾಧಿಕಾರಿಯಾಗಿರುತ್ತಾನೆ. ಜಾತಿ, ಲಿಂಗ, ವರ್ಗಭೇದವಿಲ್ಲದೆ ಸರ್ಕಾರ ಸ್ತ್ರೀ-ಪುರುಷರಿಗೆ ಸಮಾನ ಹಕ್ಕು, ಸ್ವಾತಂತ್ರ್ಯ, ಅವಕಾಶ ನೀಡಬೇಕೆನ್ನುವದಾಗಿತ್ತು. ಗ್ರಾಮದ ಅಭಿವೃದ್ಧಿಯಿಂದಲೇ ದೇಶದ ಅಭಿವೃದ್ಧಿ ಸಾಧ್ಯವೆಂದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಮನವರಿಕೆಯಾಯಿತು. ಭಾರತದಲ್ಲಿನ ಗ್ರಾಮಪಂಚಾಯಿತಿ ಲಕ್ಷಣಗಳನ್ನು ಪುರಾತನ ಕಾಲದಿಂದಲೇ ಗುರುತಿಸಬಹುದು.

ಒಂದು ದೇಶದ ಅಭಿವೃದ್ಧಿ ಆ ದೇಶದ ಗ್ರಾಮಗಳ ಅಭಿವೃದ್ಧಿಯ ಮೇಲೆ ಅವಲಂಬಿತವಾಗಿರುತ್ತದೆ. ಗ್ರಾಮದ ಜನರ ಬದುಕನ್ನು ಉತ್ತಮಗೊಳಿಸುವ ಪರಿಯೇ ಗ್ರಾಮೀಣಾಭಿವೃದ್ಧಿಯಾಯಿತು.[೨] ಭಾರತದಲ್ಲಿನ ಗ್ರಾಮಪಂಚಾಯತಿಯ ಉದಯವನ್ನು ವೇದಗಳ ಕಾಲದಿಂದ ಕಾಣಬಹುದು. ಪ್ರೀತು ಎಂಬ ದೊರೆ ಗಂಗಾ ಹಾಗು ಯಮುನಾ ನದಿಗಳ ಮಧ್ಯದ 'ದೋಅಬ್' ಪ್ರದೇಶದಲ್ಲಿ ತನ್ನ ಅಧಿಪತ್ಯ ಸ್ಥಾಪಿಸಿ, ಅಲ್ಲಿ ಪಂಚಾಯತ್ ವ್ಯವಸ್ಥೆಯನ್ನು ಜಾಗಿಗೊಳಿಸಿದುದು ಪ್ರಪಂಚದ ಪ್ರಥಮ ಪಂಚಾಯತಿ ವ್ಯವಸ್ಥೆ ಎಂದು ತಿಳಿಯಲ್ಪಡುತ್ತದೆ.[೩] ಆರ್ಯರ ಕಾಲದಿಂದಲೂ ಈ ಪದ್ಧತಿ ಆಚರಣೆಯಲ್ಲಿರುವುದು ಕಂಡುಬರುತ್ತದೆ. ಕ್ರಿ.ಶ. ೧೨ ನೇಯ ಶತಮಾನದಲ್ಲಿ 'ಮೆರೂರು' ಅಗ್ರಹಾರದ ಸ್ಥಾನಿಕ ಆಡಳಿತ ವೈಖರಿ

ಪ್ರಕಾರ - 'ಉಮೇದುದಾರರು ಪ್ರಚಾರ ನಡೆಸಿ ಜನರಲ್ಲಿ ಮತ ಕೋರುತ್ತಿದ್ದರು. ಚುನಾವಣಾ ದಿನ ದೇವಸ್ಥಾನದಲ್ಲಿ ಜನ ಸೇರಿ ತಮಗಿಷ್ಟವಾದವರ ಹೆಸರನ್ನು ಓಲೆಯ ಮೇಲೆ ಬರೆದು ತಮ್ಮ ಚೇರಿಯ 'ಕುಡುವೊಲೈ' (ಕೊಡಗಳು)ಯಲ್ಲಿ ಹಾಕುತ್ತಿದ್ದರು. ನಂತರದಲ್ಲಿ ಆ ಊರಿನ ಹಿರಿಯರು ಓಲೆಯಲ್ಲಿರುವ ಹೆಸರನ್ನು ಕೂಗಿ ಹೇಳುತ್ತಿದ್ದನು. ಹೀಗೆ ೩೦ ಚೇರಿಗಳಿಗೆ, ೩೦ ಜನರ ಆಯ್ಕೆ ನಡೆಯುತ್ತಿತ್ತು. ಅದರಲ್ಲಿ ೧೨ ಜನ ವಾರ್ಷಿಕ ಸಮಿತಿಗೆ, ೧೨ ಜನ ತೋಟಗಾರಿಕೆ ಸಮಿತಿಗೆ, ೬ ಜನಕೆರೆ ಸಮಿತಿಗೆ ನೇಮಕವಾಗುತ್ತಿದ್ದರು. ಮಿಕ್ಕ ಹೆಸರಿನಿಂದ ಬಂಡಾರಿಕ, ಕರಣಿಕ ಮುಂತಾದ ಅಧಿಕಾರಿಗಳನ್ನು ಚುನಾಯಿಸುತ್ತಿದ್ದರು. ಈ ಸಮಿತಿಯ ಅಧಿಕಾರಾವಧಿ ೩೬೦ ದಿನಗಳು. ಉಳಿದ ೫ ದಿನಗಳನ್ನು ಲೆಕ್ಕಪತ್ರಗಳ ತಪಾಸಣೆಗೆ ಮೀಸಲಾಗಿಡಲಾಗುತ್ತಿತ್ತು[8]. ಹಾಗೂ ಈ ಗ್ರಾಮ ಪಂಚಾಯತಿಗಳು ಗ್ರಾಮದ ರಕ್ಷಣಾ ಕಾರ್ಯವನ್ನು ಮಾಡುತ್ತಿದ್ದವು. ರಾಜ್ಯದ ಕಂದಾಯವನ್ನು ವಸೂಲಿ ಮಾಡುವವರು ನಾಗರಿಕರ ಮೇಲೆ ನೂತನ ತೆರಿಗೆ ವಿಧಿಸುವ, ಗ್ರಾಮಸ್ಥರ ವಿವಾದಗಳನ್ನು ಅನುಷ್ಠಾನಗೊಳಿಸುವ ಕಾರ್ಯವನ್ನು ಮಾಡುತ್ತಿದ್ದರು. ಅನಾಥಾಲಯ, ಧರ್ಮಛತ್ರ, ಪಾಠಶಾಲೆ ಹಾಗೂ ದೇವಸ್ಥಾನಗಳನ್ನು ಸ್ಥಾಪಿಸುತ್ತಿದ್ದರು. ನೈಸರ್ಗಿಕ ವಿಪತ್ತು ತಲೆದೋರಿದ ಸಂದರ್ಭದಲ್ಲಿ ಪರಿಹಾರ ಕಾರ್ಯ ರೂಪಿಸುತ್ತಿದ್ದರು. ವೇದಕಾಲಗಳ ಗ್ರಾಮಪಂಚಾಯತಿಯಲ್ಲಿ ಮಹಿಳೆಯ ಕಾರ್ಯಗಳ ಬಗ್ಗೆ ಉಲ್ಲೇಖವೇ ಇಲ್ಲ. ಕಾರಣ ಮಹಿಳೆಯನ್ನ ಅಲ್ಲಿ ಹಿಂದಕ್ಕೆ ಸರಿಸಲಾಗಿತ್ತು. ಅವಳ ಕಾರ್ಯಚಟುವಟಿಕೆಗಳನ್ನು ಕೌಟುಂಬಿಕ ನೆಲೆಯಿಂದ ಗುರುತಿಸಲಾಗಿದೆ.

ಸ್ವಾತಂತ್ರ್ಯನಂತರದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಗ್ರಾಮೀಣಾಭಿವೃದ್ಧಿಯ ಮಹತ್ವವನ್ನು ಅರಿತು, ಗ್ರಾಮೀಣಾಭಿವೃದ್ಧಿಗೆ ಹೆಚ್ಚು ಒತ್ತು ನೀಡಲಾರಂಭಿಸಿದರು. ವಿಕೇಂದ್ರಿಕರಣ ವ್ಯವಸ್ಥೆಯಿಂದ ಗ್ರಾಮದ ಅಭಿವೃದ್ಧಿ ಸಾಧಿಸಬಹುದೆಂದು ನೆಹರು ಹಾಗೂ ಗಾಂಧೀಜಿ ಅರಿತರು. ಬ್ರಿಟೀಷರ ಕಾಲದಲ್ಲಿ ಶಿಥಿಲಗೊಂಡಿದ್ದ ಗ್ರಾಮಗಳ ಸುಧಾರಣೆಗೆ ಹೆಚ್ಚಿನ ಮಹತ್ವ ಬಂದಿತು. ಸಂವಿಧಾನದ ೪೦ ನೇ ವಿಧಿಯಲ್ಲಿ ರಾಷ್ಟ್ರ ನೀತಿಯ ನಿರ್ದೇಶಕ ತತ್ವಗಳ ಪ್ರಕಾರ ಸಂವಿಧಾನ ರಚನಾಕಾರರು 'ರಾಜ್ಯ ಪಂಚಾಯತಿಗಳನ್ನು ಸ್ಥಾಪಿಸುವ ವ್ಯವಸ್ಥೆ ಮಾಡಲಿ, ಅವುಗಳಿಗೆ ಅವಶ್ಯವೆನಿಸುವಷ್ಟು ಅಧಿಕಾರಗಳನ್ನು ನೀಡಿ, ಅವುಗಳನ್ನು ಸ್ವಾವಲಂಬಿ ಸಂಸ್ಥೆಗಳನ್ನಾಗಿಸಿ ಎಂದು ಉಪದೇಶಿಸಿದ್ದರು.[೫] ಒಟ್ಟು ಕೇಂದ್ರೀಕೃತ ಆಡಳಿತದಿಂದ ಜನಸಾಮಾನ್ಯರ ಮೂಲಭೂತ ಅವಶ್ಯಕತೆಗಳನ್ನು ಪೂರೈಸಲಾಗದು, ರಾಷ್ಟ್ರದ ಅಧಿಕಾರವನ್ನು ಸ್ಥಳೀಯ ಸಂಸ್ಥೆಗಳಿಗೆ ಹಂಚುವ ಮೂಲಕ ಗ್ರಾಮದ ಅಭಿವೃದ್ಧಿ ಸಾಧ್ಯವಾಗುವುದೆಂದು ಅರಿತ ನೆಹರು ೧೯೫೨ ರಲ್ಲಿ ಪಂಚವಾರ್ಷಿಕ ಯೋಜನೆಯನ್ನು ಕೈಗೊಂಡರು. ಗ್ರಾಮಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ನೀಗಿಸಲು, ಕೃಷಿ ಅಭಿವೃದ್ಧಿ, ಗ್ರಾಮೀಣ ಗೃಹ ನಿರ್ಮಾಣ, ಆರೋಗ್ಯ ಕೇಂದ್ರಗಳ ಸ್ಥಾಪನೆ, ನ್ಯಾಯಬೆಲೆ ಅಂಗಡಿ, ಗ್ರಂಥಾಲಯಗಳು, ವಯಸ್ಕರ ಶಿಕ್ಷಣ ತರಬೇತಿ ಕೇಂದ್ರ, ಗುಡಿ ಕೈಗಾರಿಕೆ ಹಾಗು ಬಡತನ ನಿವಾರಣ (ಗರೀಬಿ ಹಟಾವೋ) ಕಾರ್ಯಕ್ರಮ, ಶುದ್ಧ ಕುಡಿಯುವ ನೀರಿಗಾಗಿ ಟ್ಯಾಂಕುಗಳ ಸೌಕರ್ಯ

ಮುಂತಾದವುಗಳನ್ನು ಯೋಜಿಸಿತು. ಆದರೆ ಯೋಜನೆಗಳು ನಿರೀಕ್ಷಿತ ಫಲವನ್ನು ಕೊಡಲಿಲ್ಲ. ಕೆಳಸ್ತರದಲ್ಲಿರುವ ಗ್ರಾಮೀಣ ಜನರಿಗೆ ಯೋಜನೆಗಳು ತಲುಪಲೇ ಇಲ್ಲ. ವಿಫಲಗೊಂಡ ಯೋಜನೆಗಳ ಪುನರ್‌ರಚನೆಗಾಗಿ ೧೯೫೬ ರಲ್ಲಿ ಎರಡನೇಯ ಪಂಚವಾರ್ಷಿಕ ಯೋಜನೆಯನ್ನು ಕೈಗೊಳ್ಳಲಾಯಿತು. ಈ ಯೋಜನೆಯಡಿಯಲ್ಲಿ ರಾಷ್ಟ್ರೀಯ ವಿಸ್ತರಣಾ ಸೇವೆಯ ಬ್ಲಾಕ್‌ಗಳನ್ನು (National Extention Service Blocks) ಸ್ಥಾಪಿಸಲಾಯಿತು.[೬] ಆಡಳಿತದ ಉಸ್ತುವಾರಿಯಾಗಿ ಗ್ರಾಮಪಂಚಾಯತಿಯ ಜನತಾ ಪ್ರತಿನಿಧಿಗಳು, ಗ್ರಾಮಸೇವಕರು, ಸಹಾಯಕ ಅಭಿವೃದ್ಧಿ ಅಧಿಕಾರಿಗಳು ಹಾಗೂ ಬ್ಲಾಕ್ ಅಭಿವೃದ್ಧಿ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿದ್ದರು. ಆದರೆ ಈ ಯೋಜನೆಗಳೂ ಫಲಕಾರಿಯಾಗಲಿಲ್ಲ. ಗ್ರಾಮೀಣ ಜನತೆ ಯೋಜನೆಯ ಭಾಗವಾಗಿ ಗುರುತಿಸಲೇಯಿಲ್ಲ.

ಕೇಂದ್ರ ಸರ್ಕಾರವು ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಬಲಪಡಿಸಲು ೧೯೫೭ ರಲ್ಲಿ ಬಲವಂತರಾಯ ಮೆಹತಾ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯು ಗ್ರಾಮೀಣ ಅಭಿವೃದ್ಧಿಯಲ್ಲಿ ತೊಡಕಾದ ಅಂಶಗಳನ್ನು ಪರಿಶೀಲಿಸಿ ವರದಿ ನೀಡಿತು. ಅದರನ್ವಯ ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯತಿ, ತಾಲ್ಲೂಕ ಮಟ್ಟದಲ್ಲಿ ಪಂಚಾಯತಿ ಸಮಿತಿ (ಬ್ಲಾಕ್ ಸಮಿತಿ) ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ ಎಂಬ ಮೂರು ಹಂತಗಳ ಮೂಲಕ ಸ್ಥಳೀಯ ಸರ್ಕಾರಗಳು ಕಾರ್ಯ ನಿರ್ವಹಿಸಬೇಕು, ೩ ಸ್ತರಗಳಲ್ಲಿ ಪ್ರಾಮಾಣಿಕವಾಗಿ ಅಧಿಕಾರ ವರ್ಗಾವಣೆಯಾಗಬೇಕು, ಆ ಸಂಸ್ಥೆಗಳು ಸಿದ್ಧಪಡಿಸಿದ ಯೋಜನೆಯ ಮುಖಾಂತರವೇ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಕಾರ್ಯಗಳಾಗಬೇಕು. ಅವುಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡುವುದರ ಮೂಲಕ ಜವಾಬ್ಧಾರಿ ಹೆಚ್ಚಿಸಬೇಕು. ಮೂರು ಹಂತಗಳ ವರದಿಯನ್ನು ೧೯೫೮ ರ ಜನೇವರಿ ೨೨ ರಂದು ರಾಷ್ಟ್ರೀಯ ಅಭಿವೃದ್ಧಿ ಮಂಡಳ ಸಮಿತಿಯು ಅಂಗೀಕರಿಸಿತು.[೭] ಕೆಳಮಟ್ಟದಲ್ಲಿರುವ ಗ್ರಾಮ ಪಂಚಾಯತಿ ಹಲವು ಗ್ರಾಮಗಳನ್ನು ಒಳಗೊಂಡಿದ್ದು, ಅದರಲ್ಲಿಯ ಪ್ರಜೆಗಳು ನೇರವಾಗಿ ಆಯ್ಕೆಯಾಗಬೇಕು. ಗ್ರಾಮದ ವಯಸ್ಕ ಜನರಿಂದ ಕೂಡಿದ ಗ್ರಾಮಸಭೆ ಶಾಸಕಾಂಗದಂತೆ ಕಾರ್ಯ ಮಾಡಬೇಕು. ಇದರ ಮುಖ್ಯ ಅಧಿಕಾರ ಕಾರ್ಯಗಳೆಂದರೆ – ಗ್ರಾಮದ ವಾರ್ಷಿಕ ಲೆಕ್ಕ ವಿವರಣೆ ಚರ್ಚಿಸುವ, ಆಡಳಿತ ವರದಿಯನ್ನು ಪರಿಶೀಲಿಸುವ, ತೆರಿಗೆಯನ್ನು ವಿಧಿಸುವ ಸೂಚನೆಗಳ ಬಗ್ಗೆ ನಿರ್ಧಾರ ಕೈಕೊಳ್ಳುವುದಾಗಿತ್ತು. ಗ್ರಾಮೀಣ ಜನರಲ್ಲಿ ಪ್ರಜಾಪ್ರಭುತ್ವ ತತ್ವಗಳ ಅರಿವನ್ನು ನೀಡುವ ಆಡಳಿತವನ್ನು ವಿಕೇಂದ್ರಿಕರಣಗೊಳಿಸುವುದು ಗ್ರಾಮಪಂಚಾಯತಿಯ ಉದ್ದೇಶವಾಗಿತ್ತು.

ಬಲವಂತರಾಯ್ ಸಮಿತಿಯು ಮಹಿಳೆಯರಿಗೆ, ಅಂಚಿನಲ್ಲಿರುವವರಿಗೆ, ಹಿಂದುಳಿದ ಜಾತಿ ಜನಾಂಗದವರಿಗೆ ಮೀಸಲಾತಿ ನೀಡುವ ಅಗತ್ಯತೆ ಬಗ್ಗೆ ಒತ್ತಿ ಹೇಳಿತು. ಈ ಸಮಿತಿ ಅನ್ವಯ ಪ್ರತಿ

ಪಂಚಾಯತಿಗೆ ಇಬ್ಬರು ಮಹಿಳೆಯರನ್ನು ನಾಮಕರಣ ಮಾಡಬೇಕು, ಅವರಿಗೆ ಸರ್ವ ಸ್ವಾತಂತ್ರ ಕೊಡಬೇಕೆಂದು ಹೇಳಿತು. ನಂತರದಲ್ಲಿ ಭಾರತದಲ್ಲಿ ಮೊದಲ ಬಾರಿಗೆ ೧೯೫೮ ರಲ್ಲಿ ರಾಜಸ್ಥಾನ ಸರ್ಕಾರವು ಪಂಚಾಯತ್ ಯೋಜನೆಯನ್ನು ಜಾರಿಗೆ ತಂದಿತು. 'ಮಹಿಳೆಯರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡಬೇಕೆನ್ನುವ ಸಮಿತಿಯ ಸಲಹೆಯನ್ನು ಪುರುಷ ನಿರ್ಮಿತ ವ್ಯವಸ್ಥೆ ನಿರಾಕರಿಸಿತು. ಕರ್ನಾಟಕದಲ್ಲಿ ಗ್ರಾಮಪಂಚಾಯತಿ ಉದಯವನ್ನು ಆಗಿನ ಕಾಲದ ಮೈಸೂರ ಸರ್ಕಾರವು ೧೮೮೯ ರಲ್ಲಿ ಗ್ರಾಮಪಂಚಾಯತಿ ವ್ಯವಸ್ಥೆಯನ್ನು ರೂಪಿಸುವ ಮುಖಾಂತರ ನೋಡಬಹುದು.[೮] ಅಲ್ಲಿ ಮಹಿಳೆಯರಿಗೆ ನೀಡುವ ಹಕ್ಕುಗಳ ಬಗ್ಗೆ ಉಲ್ಲೇಖವಿರಲಿಲ್ಲ. ಮಹಿಳೆಯರನ್ನು ಅಲಕ್ಷಿಸಲಾಗಿತ್ತು. ಆಸ್ತಿ ಹೊಂದಿದವರು, ಪದವೀಧರರು ಮತ ಚಲಾಯಿಸುವ ಹಕ್ಕನ್ನು ಪಡೆದಿದ್ದರು. ಇಲ್ಲಿಯೂ ಮಹಿಳೆಯ ಪಾತ್ರ ಗೌಣವಾಗಿತ್ತು. ಬಡವರಿಗೆ, ಮಹಿಳೆಯರಿಗೆ ಮತದಾನದ ಹಕ್ಕಿರಲಿಲ್ಲ. ಈ ವ್ಯವಸ್ಥೆಯ ಮೂಲ ಕೇಂದ್ರ ಪುರುಷನಾದ್ದರಿಂದ, ಮಹಿಳೆಯರಿಗೆ ಸಮಾನತೆ ನೀಡುವುದಿರಲಿ, ಅವರ ಪರವಾದ ಸಕಾರಾತ್ಮಕ ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳಲಾಗುತ್ತಿರಲಿಲ್ಲ. ರಾಜಕೀಯ ಕ್ಷೇತ್ರದ ಇಡೀ ವ್ಯವಸ್ಥೆ ಏಕಾಕಾರವಾಗಿ ಪುರುಷ ನೆಲೆಯನ್ನು ಸಂರಚಿತವಾಗಿರುವಾಗ ಮಹಿಳೆಯ ಸಂವೇದನ, ಅಭಿವ್ಯಕ್ತಿ ಸ್ವಾತಂತ್ರ ನಗಣ್ಯವಾಗಿ ಗೋಚರಿಸುತ್ತಿದ್ದವು. ಅಧಿಕಾರದ ಅವಕಾಶ ದೊರಕದ ಸಮಯ ಅದು. ಆಗ ತನ್ನ ಅಭಿವ್ಯಕ್ತಿ ಸ್ವಾತಂತ್ರವನ್ನು ವ್ಯಕ್ತಪಡಿಸದ ಸನ್ನಿವೇಶದಲ್ಲಿ ಮಹಿಳೆಯಿದ್ದಳು.

೧೯೨೫ ರಲ್ಲಿ ಮೈಸೂರ ಸರ್ಕಾರವು ಗ್ರಾಮಪಂಚಾಯಿತಿ ಮತ್ತು ಜಿಲ್ಲಾ ಬೋರ್ಡ್ ಕಾಯ್ದೆಯನ್ನು ರೂಪಿಸಿತು. ಆದರೆ ಅಲ್ಲಿಯೂ ಯಾವುದೇ ರೀತಿಯ ನಿರೀಕ್ಷಿತ ಬದಲಾವಣೆಗಳಾಗಲಿಲ್ಲ. ಗ್ರಾಮ ಪಂಚಾಯಿತಿ ವ್ಯವಸ್ಥೆಯನ್ನು ಬಲಪಡಿಸಲು, ಅಂಚಿನಲ್ಲಿರುವ ಮಹಿಳೆಯರಿಗೆ ವಿಶೇಷ ಸೌಲಭ್ಯ, ಸ್ಥಾನಮಾನ, ಅವಕಾಶ ನೀಡುವುದಕ್ಕಾಗಿ ೧೯೬೩ ರಲ್ಲಿ ಕೊಂಡಜ್ಜಿ ಬಸಪ್ಪ ಸಮಿತಿ ನೇಮಕವಾಯಿತು.[೯] ಈ ಸಮಿತಿ ಶಿಫಾರಸ್ಸಿನ ಮೇರೆಗೆ ಮಹಿಳೆಯರಿಗೆ ಪ್ರಾತಿನಿಧ್ಯ ಕೊಟ್ಟಿದ್ದರೂ, ಅಲ್ಲಿ ಅವಳಿಗೆ ಆಯ್ಕೆ, ಸಮ್ಮತಿ, ಹೊಣೆಗಾರಿಕೆಯನ್ನು ತಡೆಹಿಡಿಯಲಾಯಿತು. ನಂತರದಲ್ಲಿ ಅಶೋಕ ಮೆಹತಾ ಸಮಿತಿಯ ಶಿಫಾರಸ್ಸಿನ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರವು ದಿ. ನಜ಼ೀರ್ ಸಾಬ್ ನೇತೃತ್ವದಲ್ಲಿ ೧೯೮೫ ರಲ್ಲಿ 'ಜನತೆಗೆ ಅಧಿಕಾರ' ಎಂಬ ತತ್ವದಡಿಯಿಂದ ಪಂಚಾಯತ್‌ರಾಜ್ ವ್ಯವಸ್ಥೆಯ ಕಾಯ್ದೆ ಮೂಲಕ ಜಾರಿಗೆ ತಂದಿತು.[೧೦] ಈ ವ್ಯವಸ್ಥೆ ಕರ್ನಾಟಕ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್ ಸಮಿತಿ, ಮಂಡಲ ಪಂಚಾಯಿತಿ ಮತ್ತು ನ್ಯಾಯ ಪಂಚಾಯತಿಗಳನ್ನು ಜಾರಿಗೆ ತಂದಿತು.

ಮಹಿಳೆಯರು ಪ್ರಜಾಪ್ರಭುತ್ವದ ಅಡಿಯಲ್ಲಿ ತಮ್ಮ ಹಕ್ಕು-ಅವಕಾಶಗಳನ್ನು ಸ್ವತಃ ಪಡೆಯಬೇಕೆಂದು, ಅದಕ್ಕಾಗಿ ಸರ್ಕಾರ ಮಹಿಳೆಯರಿಗೆ ವಿಶೇಷವಾದ ರಾಜಕೀಯ ಸ್ಥಾನ,

ಅವಕಾಶಗಳನ್ನು ನೀಡಬೇಕೆಂಬ ಮೂಲಭೂತ ಹಕ್ಕಿನ ಪ್ರಶ್ನೆ ಮರು ಚಿಂತನೆಗೆ ಹಚ್ಚಿತು. ಪಂಚಾಯತಿಯಲ್ಲಿ ಶೇಕಡ ೨೫% ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿಡಬೇಕು ಹಾಗೂ ಈ ವ್ಯವಸ್ಥೆ ಕಡ್ಡಾಯವಾಗಿರಬೇಕೆಂಬ ಗಟ್ಟಿ ನಿಲುವನ್ನು ಸರ್ಕಾರ ತಾಳಿತಾದರೂ ಪರಿಪೂರ್ಣತೆಯನ್ನು ಸಾಧಿಸಲಿಲ್ಲ. ಮೊಟ್ಟ ಮೊದಲಬಾರಿಗೆ ಮಹಿಳೆಯರನ್ನು ಸ್ವತಂತ್ರ ಘಟಕವೆಂದು ಪರಿಭಾವಿಸಿದ ಕರ್ನಾಟಕ ಸರ್ಕಾರ ಮಹಿಳೆಯರಿಗೆ ರಾಜಕೀಯ ಮೀಸಲಾತಿ ನೀಡುವುದಾಗಿ ಹೇಳಿತು. ಶತಮಾನಗಳಿಂದ ಪುರುಷ ಸಮಾಜದಿಂದ ದೂರೀಕರಿಸಲ್ಪಟ್ಟಿದ್ದ ಮಹಿಳೆ, ಪಂಚಾಯತ್ ವ್ಯವಸ್ಥೆ ಮೂಲಕ ಸಾಮಾಜಿಕ ಹಾಗೂ ಸಾರ್ವಜನಿಕ ನ್ಯಾಯ ಪಡೆದಳಾದರೂ, ಮೀಸಲಾತಿ ಸ್ಥಾನಗಳನ್ನು ಪಡೆದ ಮಹಿಳೆಯನ್ನು ಮುಂದಿಟ್ಟುಕೊಂಡು ಆಯಾ ಕುಟುಂಬ, ಜಾತಿ, ವರ್ಗಗಳು ರಾಜಕೀಯ ದಾಳ ನಡೆಸಹತ್ತಿದವು. ಕುಟುಂಬದ ಹಾಗೂ ಸಾರ್ವಜನಿಕ ಒತ್ತಡಗಳ ಬಗೆಗೆ ಪ್ರತಿಭಟಿಸುವ ಸ್ಥೈರ್ಯ, ಸಾಮರ್ಥ್ಯ ಅವಳಲ್ಲಿದ್ದರೂ, ಪುರುಷ ಕೇಂದ್ರಿತ ವ್ಯವಸ್ಥೆ ಅವಳ ಬಗ್ಗೆ ಮಿಥ್ಯದ ಗ್ರಹಿಕೆಯನ್ನು ಕಟ್ಟಿಕೊಡತೊಡಗಿತು. ಪಂಚಾಯತ್ ರಾಜ್‌ದಲ್ಲಿನ ಮಹಿಳಾ ಮೀಸಲಾತಿ ವಿಚಾರವು, ಮಹಿಳಾ ಸಬಲೀಕರಣದ ನೆಲೆಯಲ್ಲಿ ಚರ್ಚಿತವಾಗತೊಡಗಿತು.

೧೯೯೩ ರಲ್ಲಿ ಸಂವಿಧಾನದ ೭೩ ಮತ್ತು ೭೪ ರ ತಿದ್ದುಪಡಿಯಿಂದ ಸಂವಿಧಾನದ ೯ ರ ಭಾಗದಲ್ಲಿ ತಿದ್ದುಪಡಿಯಾಯಿತು. ಇದರಿಂದ ಸ್ಥಳೀಯ ಸಂಸ್ಥೆಯಡಿಯ ಗ್ರಾಮಪಂಚಾಯತಿಗಳಲ್ಲಿ ಮಹಿಳೆಯರಿಗೆ ಶೇ. ೩೩.೩೩. ರಷ್ಟು ಮೀಸಲಾತಿ ನೀಡಲಾಯಿತು.[೧೧] ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರ ಸ್ತ್ರೀ-ಪುರುಷರಲ್ಲಿ ಹಂಚಲ್ಪಟ್ಟಿದ್ದನ್ನು ಅಧಿಕಾರ ವಿಕೇಂದ್ರೀಕರಣ ಎನ್ನಲಾಯಿತು. ಈ ವ್ಯವಸ್ಥೆಯಿಂದಾಗಿ ಅಲ್ಪ ಸಂಖ್ಯೆಯಲ್ಲಿ ಮಹಿಳೆಯರು ಆಡಳಿತ ವ್ಯವಸ್ಥೆಯಲ್ಲಿ ಭಾಗವಹಿಸುವ ಅವಕಾಶವನ್ನು ಪಡೆಯುವಂತಾಯಿತು. ಗ್ರಾಮಪಂಚಾಯಿತಿಯ ಅಧಿಕಾರವಧಿಯನ್ನು ೫ವರ್ಷಕ್ಕೆ ನಿಗದಿಪಡಿಸಲಾಯಿತು. ಗ್ರಾಮ ಪಂಚಾಯಿತಿಯ ಒಟ್ಟು ಸದಸ್ಯರಲ್ಲಿ ಶೇಕಡ ೧೫ ರಷ್ಟು ಸ್ಥಾನಗಳನ್ನು ಪರಿಶಿಷ್ಟ ಜಾತಿಯವರಿಗೆ, ಪರಿಶಿಷ್ಟ ಪಂಗಡದವರಿಗೆ, ಶೇ. ૩ ಕ್ಕೆ ಕಡಿಮೆಯಿಲ್ಲದಂತೆ ಹಾಗೂ ಪ್ರತಿ ಸ್ಥಾನಗಳಲ್ಲಿ ಮೂರನೇಯ ಒಂದು (೧/೩) ಭಾಗದಷ್ಟು ಸ್ಥಾನಗಳನ್ನು ಮಹಿಳೆಯರಿಗೆ (ಸಾಮಾನ್ಯ) ಮೀಸಲಾಗಿಡಲಾಗಿದೆ. ಅಧ್ಯಕ್ಷ, ಉಪಾಧ್ಯಕ್ಷ ಹಾಗೂ ಸದಸ್ಯ ಸ್ಥಾನಗಳಲ್ಲಿ ಮೀಸಲಾತಿ ಅನ್ವಯ ಅಂಚಿನಲ್ಲಿರುವ, ಸಮಾಜದಿಂದ ತುಳಿತಕ್ಕೆ ಒಳಗಾದ, ಆರ್ಥಿಕವಾಗಿ ಹಿಂದುಳಿದ ವರ್ಗದ ಮಹಿಳೆಯರು ಹಾಗೂ ಎಲ್ಲ ವರ್ಗದ ಮಹಿಳೆಯರು (ಸಾಮಾನ್ಯ) ವಿಕೇಂದ್ರೀಕರಣ ವ್ಯವಸ್ಥೆಯ ಮೂಲಕ ಗ್ರಾಮ ಪಂಚಾಯಿತಿಗಳಲ್ಲಿ ಅಧಿಕಾರ ಪಡೆದರು. ಇದರೊಂದಿಗೆ ಗ್ರಾಮದ ವಯಸ್ಕ ನಾಗರಿಕರೆಲ್ಲಾ ಲಿಂಗ ಭೇದವಿಲ್ಲದೆ ಗ್ರಾಮಸಭೆಯಲ್ಲಿ ಭಾಗವಹಿಸುವ, ಗ್ರಾಮದ ನಾಗರಿಕರ, ಮೂಲಭೂತ ಸಮಸ್ಯೆಗಳನ್ನು ಗುರುತಿಸುವ ಹಾಗೂ ಪರಿಹರಿಸುವ, ಅಭಿವೃದ್ಧಿ ಕಾರ್ಯಗಳಲ್ಲಿ ಯೋಜನೆಗಳನ್ನು ರೂಪಿಸುವ ಅಧಿಕಾರ ಪಡೆವ ಮೂಲಕ ರಾಷ್ಟ್ರದ ಭಾಗವಾದ ಸ್ಥಳೀಯ ಸರ್ಕಾರದ ಭಾಗವಹಿಸಿದರು.

ಮಹಿಳೆಯು ಸಂವಿಧಾನದ ಅಡಿಯಲ್ಲಿರುವ ಮೂಲಭೂತ ಹಕ್ಕುಗಳಾದ ಸಮಾನತೆ, ಸ್ವಾತಂತ್ರ್ಯ, ಶೋಷಣೆಯನ್ನು ವಿರೋಧಿಸುವ, ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಲಿಂಗಭೇದವಿಲ್ಲದೆ ಸಮಾನ ಅವಕಾಶ ಪಡೆಯುವ ಅಧಿಕಾರ ಪಡೆದಿರುವಳು. ಈ ಮೂಲಕ ಸಮಾಜದ ಪೂರ್ವಗ್ರಹ ವ್ಯವಸ್ಥೆಯನ್ನು ಬದಲಿಸುವ ಅಧಿಕಾರ ಪಡೆದಿರುವಳೆಂದು ಸಂವಿಧಾನ ಹೇಳುತ್ತದೆ. ಇಷ್ಟಾದರೂ ಕೇವಲ ಶೇಕಡ ೩೩ ರಷ್ಟು ರಾಜಕೀಯದದಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯ ನೀಡಿತು. ಸ್ತ್ರೀವಾದಿಗಳು ಮಹಿಳಾ ಮೀಸಲಾತಿ ಬಗ್ಗೆ ಚಿಂತನೆ, ವಿಚಾರ, ಕಮ್ಮಟ ಏರ್ಪಡಿಸಿದರು. ಮಹಿಳೆಯರಿಗೆ, ಹಿಂದುಳಿದವರಿಗೆ ಮೀಸಲಾತಿ ಹೊಸ ಆಶಾಕಿರಣವಾಗಿ ಗೋಚರವಾಯಿತು. ೧೯೯೩-೯೪ ರಲ್ಲಿ ವಿವಿಧ ರಾಜ್ಯಗಳಲ್ಲಿ ಈ ಕಾಯ್ದೆ ಅನ್ವಯ ಮೊದಲ ಹಂತದ ಚುನಾವಣೆಗಳು ನಡೆದು ಅಪಾರ ಸಂಖ್ಯೆಯಲ್ಲಿ ಮಹಿಳಾ ಪ್ರತಿನಿಧಿಗಳು ಆಯ್ಕೆಯಾದುದು ದಾಖಲೆಯೆನಿಸಿತು. ಕರ್ನಾಟಕದಲ್ಲಿ ಹಲವಾರು ಗ್ರಾಮಪಂಚಾಯಿತಿಗಳಲ್ಲಿ ಮಹಿಳಾ ಪ್ರತಿನಿಧಿಗಳ ಸಂಖ್ಯೆಯು, ಸರ್ಕಾರದ ಕಾಯ್ದೆ ಅನ್ವಯ ನೀಡಿದ ಮೀಸಲಾತಿ ಪ್ರಮಾಣಕ್ಕಿಂತ ಹೆಚ್ಚಾಯಿತು. ಶೇಕಡ ೩೩ ರ ಬದಲಿಗೆ ಶೇಕಡ ೪೩ ಕ್ಕೆ ಏರಿತು.[೧೨]

ಗ್ರಾಮಪಂಚಾಯಿತಿಗಳ ಮೊದಲ ಹಂತದ ಚುನಾವಣೆಗಳು ನಡೆದು ಮೀಸಲಾತಿ ಅನ್ವಯ ಜನ ಪ್ರತಿನಿಧಿಗಳು ಸಹಭಾಗಿತ್ವ ಸಂಭ್ರಮದಲ್ಲಿದ್ದಾಗ 'ಭುರಿಯಾ ಸಮಿತಿ'ಯು ನೇಮಕವಾಯಿತು. ಅದರ ಶಿಫಾರಸ್ಸಿನಂತೆ ೧೯೯೩ ರ ಅನುಸೂಚಿತ ಪ್ರದೇಶಗಳ ಪಂಚಾಯಿತಿ ನಿಯಮಾವಳಿಗಳು ಸಂವಿಧಾನಿಕ ಮನ್ನಣೆಯನ್ನು ಪಡೆದವು.

ಮಹಿಳಾ ಮೀಸಲಾತಿ ಕುಗ್ಗಿಸುವ ಬಗೆ ಹಲವಾರು ವಿಚಾರಗಳು ಪುರುಷರಿಂದ ಚರ್ಚಿತವಾದವು. ಮಹಿಳೆಯರಿಗೆ ಶಿಕ್ಷಣವಿಲ್ಲ, ರಾಜಕೀಯ ತರಬೇತಿಯಿಲ್ಲ, ಸಾಮಾಜಿಕವಾಗಿ ಸಬಲರಲ್ಲ ಎಂಬ ನೆಲೆಯಿಂದ ಚರ್ಚಿಸತೊಡಗಿದರು. ಮಹಿಳೆಯರಿಗೆ ಹೆಚ್ಚಿನ ಆದ್ಯತೆ ನೀಡಿದರೆ ತಮ್ಮ ಸ್ಥಾನಕ್ಕೆ ಧಕ್ಕೆಯಾಗುವದೆಂಬುದನ್ನು ಅರಿತ ಪುರುಷರು ಅರ್ಹತೆಯ ಮಾನದಂಡವಾಗಿ ಮೀಸಲಾತಿಯನ್ನು ಬಡತನ ರೇಖೆಗೆ ಸಂಬಂಧ ಕಲ್ಪಿಸಿದರು. ಮಹಿಳಾ ಸದಸ್ಯೆಯರು ಹಾಗೂ ಅಧ್ಯಕ್ಷ-ಉಪಾಧ್ಯಕ್ಷರು ಚುನಾವಣೆಗೆ ಸ್ಪರ್ಧಿಸುವ ಪೂರ್ವದಲ್ಲಿ ಶೌಚಾಲಯ ಹೊಂದಿರಬೇಕು, ಸಾಲಗಾರರಾಗಿರಬಾರದು, ಗ್ರಾಮ ಪಂಚಾಯಿತಿಗೆ ಹಣ ಪಾವತಿಸಿರಬೇಕೆಂದು ಬಡತನವನ್ನು ಮಹಿಳೆಯರೊಂದಿಗೆ ಬೆರೆಸಿದರು. ಮನೆಯಲ್ಲಿನ ಗಂಡ ಮಾಡಿದ ಸಾಲಕ್ಕೆ ಹೆಂಡತಿಯನ್ನು ಹೊಣೆಗಾರರನ್ನಾಗಿಸುವ ಹುನ್ನಾರ ನಡೆಯಿತು. ಶಿಕ್ಷಣವಿಲ್ಲ, ರಾಜಕೀಯ ತರಬೇತಿಯಿಲ್ಲೆಂಬ ಅಂಶಗಳು ಪುರುಷ ರಾಜಕಾರಣಿಗೂ ಅನ್ವಯಿಸಲ್ಪಡುತ್ತದೆ. ಪುರುಷನಿಗೆ ಎದುರಾಗುವ ಈ ಸಂಗತಿಗಳು ದೌರ್ಬಲ್ಯಗಳೆನಿಸಿಕೊಳ್ಳುವುದಿಲ್ಲ. ಮಹಿಳೆಯರ

ಸಂದರ್ಭದಲ್ಲಿ ಮಾತ್ರ ಈ ಸಂಗತಿಗಳು ದೌರ್ಬಲ್ಯಗಳೆಂದು ನಿರ್ವಚನ ಪಡೆದುಕೊಳ್ಳುವುದೆ?. ೨೦೦೧ ರಲ್ಲಿ ಜನಗಣತಿ ನಂತರ, ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವ ಪ್ರತಿನಿಧಿಗಳು ಎರಡಕ್ಕಿಂತ ಹೆಚ್ಚು ಮಕ್ಕಳನ್ನು ಹೊಂದಿರಬಾರದೆಂದು ನಿಯಮಾವಳಿಯನ್ನು ಹಲವು ರಾಜ್ಯಗಳು ಕೈಗೊಂಡವು.[೧೩] ಈ ಚರ್ಚೆ ಏಕರೂಪವಾಗಿ ಚರ್ಚಿತವಾಯಿತು. ಆದರೆ ಈ ವಿವಾದಿತ ಕಾಯ್ದೆಯನ್ನು ೨೦೦ ಕ್ಕೂ ಹೆಚ್ಚು ಅರ್ಜಿದಾರರು ಹರಿಯಾಣ ನ್ಯಾಯಾಲಯದಲ್ಲಿ ಪ್ರಶ್ನಿಸಿದರು.

ಗ್ರಾಮಪಂಚಾಯತ್‌ಗಳಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆಯಿಂದಾದ ಬದಲಾವಣೆಗಳಾವುವು? ಪುರುಷ ಕೇಂದ್ರಿತ ಸಮಾಜ ವ್ಯವಸ್ಥೆ ಗ್ರಾಮಪಂಚಾಯಿತಿಯ ಮಹಿಳಾ ಮೀಸಲಾತಿಯನ್ನು ಹೇಗೆ ಸ್ವಾಗತಿಸಿದೆಂಬುದು ಚರ್ಚಿತ ವಿಷಯವಾಗಿದೆ. ಒಂದೆಡೆ ಮಹಿಳಾ ಪರವಾದ ವಿಶ್ಲೇಷಣೆ, ಇನ್ನೊಂದೆಡೆ ಪೂರ್ವಾಗ್ರಹವನ್ನು ಸ್ಥಿರೀಕರಿಸುವ ಹಾಗೂ ಅನುಮೋದಿಸುವ ವಿಶ್ಲೇಷಣೆ (ಗ್ರಾಮಪಂಚಾಯಿತಿ ಅನುಲಕ್ಷಿಸಿ).

ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಗ್ರಾಮಪಂಚಾಯಿತಿಯಲ್ಲಿನ ಮೀಸಲಾತಿ ಮೂಲಕ ರಾಜಕೀಯವನ್ನು ಪ್ರವೇಸುತ್ತಿರುವರು. ಮಹಿಳೆಯ ರಾಜಕೀಯ ಪಾಲ್ಗೊಳ್ಳುವಿಕೆ ಇದುವರೆಗಿದ್ದ ರಾಜಕಾರಣದಲ್ಲಿ ಅಮೂಲಾಗ್ರ ಬದಲಾವಣೆ ತರುವತ್ತ ನಡೆಯುತ್ತಿದೆ. ಈವರೆಗಿದ್ದ ಸಾಮಾಜಿಕ ಮೌಲ್ಯಗಳನ್ನು ಪ್ರಶ್ನಿಸುವ ಭಿನ್ನವಾದ ಬದಲಾವಣೆ ಆಗುತ್ತಿದೆ. ಕೌಟುಂಬಿಕ ಪ್ರೋತ್ಸಾಹವಾಗಲಿ, ಧರ್ಮ ಮುಖಂಡ ಅಥವಾ ಗ್ರಾಮ ಮುಖಂಡರ ಪ್ರೋತ್ಸಾಹದಿಂದಾಗಲಿ ಅಧಿಕಾರ ಕೇಂದ್ರಕ್ಕೆ ಪ್ರವೇಶ ಪಡೆದ ಮಹಿಳೆ ನಂತರದಲ್ಲಿ ಸ್ವಸಾಮರ್ಥ್ಯದಿಂದ ಗ್ರಾಮದಲ್ಲಿನ ಮೂಲಭೂತ ಸಮಸ್ಯೆಗಳನ್ನು ಅರಿತುಕೊಂಡು, ಅವುಗಳಿಗೆ ಪರಿಹಾರ ದೊರಕಿಸುವ ನಿಟ್ಟಿನಲ್ಲಿ ಕಾರ್ಯ ಮಾಡುತ್ತಿರುವುದು ಸ್ವಾಗತಾರ್ಹ. ಮಹಿಳೆಯರಲ್ಲಿರುವ ಸಂಘಟನಾ ಶಕ್ತಿ, ಕಲಿಯಬೇಕು, ತಿಳಿದುಕೊಳ್ಳಬೇಕು ಎಂಬ ಉತ್ಸಾಹ, ದೂರ ದೃಷ್ಟಿಕೋನ, ಆತ್ಮಸ್ಥೈರ್ಯ, ಎಲ್ಲ ವರ್ಗದವರಿಗೆ ನೀಡುವ ಆದ್ಯತೆ, ಮಹಿಳಾ ಜಾಗೃತಿ, ರಾಜಕೀಯ ಜ್ಞಾನ ಇವೆಲ್ಲವೂ ಇದುವರಿಗಿದ್ದ ಪುರುಷ ಕೇಂದ್ರಿತ ಮೌಲ್ಯಗಳನ್ನು ಪ್ರಶ್ನಿಸುತ್ತಾ, ಮಹಿಳೆಯನ್ನು ಹೊಸ ನೆಲೆಯಲ್ಲಿ ಕಟ್ಟಿಕೊಡುತ್ತಿವೆ. ಮಹಿಳೆಯರ ಗ್ರಾಮಪಂಚಾಯಿತಿಯಲ್ಲಿನ ಪಾಲ್ಗೊಳ್ಳುವಿಕೆಯು ಅನೇಕ ಗ್ರಾಮ ಸುಧಾರಣಾ ಕಾರ್ಯ ಹಾಗೂ ಅಭಿವೃದ್ಧಿ ಕಾರ್ಯಗಳೊಂದಿಗೆ ಮಿಳಿತಗೊಳ್ಳುತ್ತಿದೆ. ಗ್ರಾಮಪಂಚಾಯಿತಿ ಚುನಾವಣೆಯಲ್ಲಿ ಇದುವರೆಗಿದ್ದ ಮೋಸ, ಲಂಚ, ತಂತ್ರ ನಾಶವಾಗಿ ಸ್ವಚ್ಛ-ಹೊಸದಾದ ಅಚ್ಚುಕಟ್ಟು ಮೂಡಿದೆ. ಆದರೂ ಮಹಿಳೆಯರು ಸಮಾಜದ ಮೌಲ್ಯಗಳ ಅಧಃಪತನಕ್ಕೆ ಕಾರಣವಾಗುತ್ತಿದ್ದಾರೆಂಬುದು ಮಹಿಳಾ ರಾಜಕಾರಣದ ಬಗ್ಗೆ ಪುರುಷ ಹೊಂದಿರುವ ನಿಲುವು.

ಇಂದು ಮಹಿಳೆ ಸಮಾಜದ ಎಲ್ಲಾ ರಂಗಗಳಲ್ಲಿ ಮುನ್ನಡೆಯುತ್ತಿದ್ದಾಳೆ. ರಾಜಕೀಯ ಕ್ಷೇತ್ರದಲ್ಲಿ ಮಹಿಳಾ ಭಾಗವಹಿಸುವಿಕೆಯನ್ನು ವಿರೋಧಿಸುವ ಪುರುಷ ಕೇಂದ್ರಿತ ರಾಜಕೀಯ ವ್ಯವಸ್ಥೆ ಚುನಾವಣಾ ಸಂದರ್ಭದಲ್ಲಿ ಮಹಿಳೆಯನ್ನು 'ವೋಟ್ ಬ್ಯಾಂಕ್' ಆಗಿ ಗುರುತಿಸುತ್ತಿವೆ.[೧೪] ಗ್ರಾಮ ಪಂಚಾಯತಿಯ ಪ್ರವೇಶ ಮಹಿಳೆಯಲ್ಲಿನ ಹಿಂಜರಿಕೆ, ಕೀಳರಿಮೆಯನ್ನು ನಾಶಮಾಡಿದೆ. 'ನನ್ನ ಕ್ಷೇತ್ರದ ಜನರ ಸಮಸ್ಯೆ ಏನು ಎಂಬುದು ನನಗೆ ಗೊತ್ತು, ನಾ ಓದಿರದಿದ್ದರೂ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಧೈರ್ಯ ನನ್ನಲ್ಲಿದೆ, ಎಲ್ಲರ ಜೊತೆ ಆತ್ಮ ವಿಶ್ವಾಸದಿಂದ ಮಾತಾಡತೀನಿ, ನನ್ನ ಅಧ್ಯಕ್ಷ, ಅವಧಿಯಲ್ಲಿ ಗ್ರಾಮ ಹಿಂದೆಂದೂ ಕಾಣದ ಸೌಲಭ್ಯಗಳನ್ನು ಕಂಡಿದೆ. ಗ್ರಾಮದ ಸಮಸ್ಯೆಗಳನ್ನು ಪರಿಹರಿಸುವ ಆತ್ಮವಿಶ್ವಾಸ ನನಗಿದೆ, ಅವಧಿ ಕಡಿಮೆ ಇರುವುದರಿಂದ ಸಂಪೂರ್ಣ ಅಭಿವೃದ್ಧಿಯಾಗುತ್ತಿಲ್ಲ ಎಂಬುದು ಹಲವಾರು ಗ್ರಾಮಪಂಚಾಯತಿ ಸದಸ್ಯರ ಅಳಲು. ರಾಜಕೀಯವು ಮಹಿಳೆಯರಿಗೆ ಹೊರೆಯಾಗಿದೆ. ಶಿಕ್ಷಿತರು ಮಾತ್ರ ಅಭಿವೃದ್ಧಿ ಯೋಜನೆಗಳ ಕಾರ್ಯ ರೂಪಿಸುವರು ಎಂಬ ತಪ್ಪು ಹೇಳಿಕೆಗಳಿವೆ ಎಂಬುದನ್ನು ಕ್ಷೇತ್ರ ಕಾರ್ಯದಲ್ಲಿ ಗಮನಿಸಿದೆ.

ಮಹಿಳೆಗೆ ರಾಜಕೀಯ ವ್ಯವಹಾರವಾಗಿ ಕಾಣದೆ, ಸಮಾಜ ಸೇವೆ ಎಂಬ ಸಾರ್ಥಕ ಭಾವನೆ ನೀಡುತ್ತಿದೆ. ತನ್ನ ಅಸ್ತಿತ್ವಕ್ಕಾಗಿ, ಸ್ವಾತಂತ್ರ್ಯಕ್ಕಾಗಿ, ಬೆಲೆ ತೆತ್ತಿರುವ ಮಹಿಳೆಯ ಗುರಿ ಸಾಮಾಜಿಕ ಬದಲಾವಣೆಯಾಗಿದೆ. ಮಹಿಳೆ ಅಧಿಕಾರ ಹೊಂದಿರುವಲ್ಲಿ ಸಾರಾಯಿ ಮಾರಾಟ ನಿಷೇಧ. ಬಾಲ್ಯ ವಿವಾಹ, ಸಾರಾಯಿ ಮಾರಾಟ, ಸಾಕ್ಷರತಾ ಚಳುವಳಿಯಂತಹ ಸಾಮಾಜಿಕ ಕಾರ್ಯಕ್ರಮಗಳು ಕಂಡುಬರುತ್ತವೆ. ಪುರುಷರು ಬಳಸುತ್ತಿದ್ದ ಅಶ್ಲೀಲ ಪದಗಳ ಸಂಖ್ಯೆ ಕಡಿಮೆಯಾಗಿದೆ, ರಾಜಕೀಯದಲ್ಲಿದ್ದ ಗೂಂಡಾಗಿರಿ, ಮೋಸ ಕಡಿಮೆಯಾಗಿದೆ. ಹೀಗಿದ್ದರೂ ಸಹ ಚುನಾವಣೆಯಲ್ಲಿ ಮಹಿಳೆಯರಿಗೆ ಹೆಚ್ಚಿನ ಆದ್ಯತೆಯನ್ನು ರಾಜಕೀಯ ಪಕ್ಷಗಳು ನೀಡುತ್ತಿಲ್ಲ. ಕಾರಣ ಮಹಿಳೆ ಕರ್ತವ್ಯ ನಿಷ್ಠತೆಗೆ, ಸತ್ಯಕ್ಕೆ, ಜನರ ಒಳಿತಿಗಾಗಿ ಕಾರ್ಯಮಾಡುವುದು. ಆಲಸ್ಯ ಪುರುಷ ರಾಜಕಾರಣಿಗಳಿಗೆ ಇಕ್ಕಟ್ಟು ಮೂಡಿಸಿದೆ. ಮಹಿಳೆಗೆ ಹೆಚ್ಚಿನ ಸ್ವಾತಂತ್ರ್ಯವಾಗಲಿ, ಸಮಾನತೆಯನ್ನಾಗಲಿ ಕೊಟ್ಟಿಲ್ಲ. ರಾಜಕೀಯ ರಂಗದಲ್ಲಿ ಜನಪ್ರಿಯಳಾದರೆ ತಾನು ನಿರ್ಲಕ್ಷಿತನಾಗಬಹುದೆಂಬ ಭೀತಿ ಪುರುಷರಲ್ಲಿದೆ.

ಸರೋಜಿನಿ ನಾಯ್ಡು ನೇತೃತ್ವದಲ್ಲಿನ ಮತದಾನದ ಹಕ್ಕೊತ್ತಾಯ, ಸಮಾನತೆಯೆಡೆಗೆ, ಅಮರ್ತ್ಯ ಸೇನ್ ಬರಹಗಳು ಹಾಗೂ ವರದಿಗಳು ಮೂಲಭೂತವಾಗಿ ಮಹಿಳೆಯನ್ನು ಪರಿಭಾವಿಸಿರುವ ವ್ಯವಸ್ಥೆಯನ್ನೆ ಬದಲಿಸಿದವು. ಆದರೂ ಪುರುಷ ರಾಜಕಾರಣಿಗಳು ಮಹಿಳೆಯನ್ನು ಪರಿಭಾವಿಸುವ ಪರಿ ಬದಲಾಗಿಲ್ಲ. ಮೇಲಸ್ತರದಲ್ಲಿ ರೂಪಿತಗೊಳ್ಳುವ ಅಭಿವೃದ್ಧಿ ಕಾರ್ಯಕ್ರಮಗಳನ್ನು ತಳಮಟ್ಟದಲ್ಲಿರುವ, ಅಂಚಿನಲ್ಲಿರುವ ಹಿಂದುಳಿದ ಮಹಿಳೆಯರಿಗೆ ತಲುಪಿಸುವ ಮೂಲಕ ಅವರನ್ನು ಸಶಕ್ತಗೊಳಿಸಬೇಕು.

ಮಹಿಳಾ ಮೀಸಲಾತಿ ಮಹಿಳೆಯನ್ನು ಹೇಗೆ ಸಶಕ್ತಗೊಳಸುತ್ತದೆ? ಮಹಿಳಾ ಮೀಸಲಾತಿ ವಿಧೇಯಕದ ಕುರಿತು ಪುರುಷ ರಾಜಕಾರಣಿಗಳ ಪ್ರತಿಕ್ರಿಯೆಗಳೇನು? ಕೇಂದ್ರ ಹಾಗೂ ರಾಜ್ಯ ಶಾಸಕಾಂಗಗಳಲ್ಲಿ ಯೋಜನೆಯನ್ನು ರೂಪಿಸುವ ಅಧಿಕಾರ ಕೇಂದ್ರದ ಮುಖ್ಯವಾಹಿನಿಯಾಗಿ ಮಹಿಳೆ ಪರಿಗಣಿಸಲ್ಪಟ್ಟಿರುವಳಾ? ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಉಲ್ಲೇಖಗಳು: –**


೧) ಹೇಮಲತಾ.ಹೆಚ್.ಎಂ. ಹಾಗು ಸರೋಜಾ ಸಂತಿ, ೨೦೦೭, 'ಪಂಚಾಯತ್ ರಾಜ್‌ದಲ್ಲಿ ಮಹಿಳಾ ಸಹಭಾಗಿತ್ವ' ಪುಟ. ೧೮.

೨) ಮರುಳಸಿದ್ದಯ್ಯ. ಹೆಚ್.ಎಂ, ೧೯೯೩, 'ಗ್ರಾಮೋನ್ನತಿ' ಪುಟ. ೯

೩) ಜಿ.ಬಿ. ಶೀಲವಂತರ, ೨೦೦೧, 'ಭಾರತದ ಸಂವಿಧಾನ, ಸರಕಾರ ಮತ್ತು ರಾಜಕೀಯ' ಪುಟ ೩೩೦.

೪) ಡಾ. ಕವಂಟೆ.ಎಸ್.ಎಚ್, ೨೦೦೦ 'ಭಾರತದ ಸಂವಿಧಾನ ಹಾಗೂ ಸರಕಾರ' ಪುಟ. ೨೬೫.

೫) ಶೆಲ್ಲಿಕೇರಿ. ಹೆಚ್.ಪಿ., ೨೦೦೨, 'ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯಕ್ರಮಗಳು' ಪುಟ. ೪೨.

೬) ಸತ್ಯನಾರಾಯಣ.ಬಿ.ಎಸ್. ೨೦೦೨, 'ಸ್ಥಳೀಯ ಸಂಸ್ಥೆಗಳು ನಡೆದು ಬಂದ ದಾರಿ, ಪುಟ. ೯೮.

೭) ಟಿ.ಆರ್.ಚಂದ್ರಶೇಖರ, ೨೦೦೦. 'ವಿಕೇಂದ್ರಿಕರಣ ತತ್ವ ಆಚರಣೆ' ಪುಟ. ೬೮.

೮) ಮೀನಾಕ್ಷಿ.ಡಿ, ೨೦೦೨, 'ಗ್ರಾಮಪಂಚಾಯತಿಯಲ್ಲಿ ಮಹಿಳೆಯರ್ ಪಾತ್ರ' ಪುಟ. ೨೩೪.

೯) ಫರ್ಜಾನ್. ೨೦೦೫ 'ಗ್ರಾಮೀಣ ಪ್ರದೇಶಗಳ ಅಭಿವೃದ್ಧಿ ಅಗತ್ಯ' ವಿಜಯ ಕರ್ನಾಟಕ ಪುಟ.೪.

೧೦) ಶ್ರೀಧರ.ಎ, ೧೯೯೯ 'ಪಂಚಾಯತ್ ಮತ್ತು ಮಹಿಳೆ' ಪುಟ. ೧೭.

೧೧) ಬಿ.ಟಿ. ಲಲಿತಾನಾಯಕ್, ೧೯೯೯, 'ಮಹಿಳಾ ಮೀಸಲಾತಿ' ಪುಟ. ೯೭.

ಭಾರತೀಯ ಸ್ತ್ರೀ ತನ್ನ ಸಾಂಪ್ರದಾಯಿಕ ಪಾತ್ರದಾಚೆಗೆ ನಡೆದು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ದಿನದಿಂದಲೇ, ಭಾರತದ ಮಹಿಳಾ ಚಳುವಳಿ ಪ್ರಾರಂಭವಾಯಿತು.[೧] ಸ್ವಾತಂತ್ರ್ಯ ನಂತರದಲ್ಲಿ ಲಿಂಗಭೇದವಿಲ್ಲದೇ ಸ್ತ್ರೀ-ಪುರುಷರಿಗೆ ಸಮಾನತೆ, ಸ್ವಾತಂತ್ರ್ಯಗಳ ಮೂಲಭೂತ ಹಕ್ಕುಗಳನ್ನು ಕಲ್ಪಿಸಿದ ಸಂವಿಧಾನವು ಭಾರತೀಯರಿಗೆ ಹೇಗೆ ಹೊಸತಾಗಿತ್ತೋ, ಹಾಗೆಯೇ ಸ್ತ್ರೀ-ಪುರುಷರ ಸಮಾನತಾ ಪರಿಕಲ್ಪನೆಯೂ ಹೊಸದಾಗಿತ್ತು. ಶತಮಾನಗಳಿಂದ ಮೇಲ್ಜಾತಿಯವರ ದಬ್ಬಾಳಿಕೆಗೆ, ತುಳಿತಕ್ಕೆ ಒಳಗಾಗಿದ್ದ, ಅಸ್ಪೃಶ್ಯತೆಯೆಂಬ ಹೀನ ಪದ್ಧತಿಯಿಂದ ಸಾಮಾಜಿಕವಾಗಿ ಸಾರ್ವಜನಿಕವಾಗಿ ಅವಮಾನಿತರಾಗಿದ್ದ ಸಮಾಜದ ಅಂಚಿನಲ್ಲಿರುವ ಹಿಂದುಳಿದ ಜಾತಿಗಳ ಪುರುಷ-ಮಹಿಳೆಯರ ಶ್ರೇಯೋಭಿವೃದ್ಧಿಗಾಗಿ ಮೇಲು-ಕೀಳೆಂಬ ಅಂತರವನ್ನು ಹೋಗಲಾಡಿಸಿ, ಸಮಾನತೆಯನ್ನು ತರಲು ರೂಪಿಸಿದ ವ್ಯವಸ್ಥೆಯೇ 'ಮೀಸಲಾತಿ'.

ಭಾರತದಲ್ಲಿ ಸಮಾಜದ ಉನ್ನತ ವರ್ಗದವರ ತುಳಿತಕ್ಕೆ, ಅಪಮಾನಕ್ಕೆ ತಳ ಸಮುದಾಯದವರು ನಲುಗಿಹೋಗಿದ್ದರು. ಹಾಗೂ ಇಂಥವರಿಗೆ ಸಮಾನ ಅವಕಾಶ-ಹಕ್ಕುಗಳನ್ನು ಕಾನೂನುಬದ್ಧವಾಗಿ ನೀಡಿದ ಸಂವಿಧಾನ ಹೊಸತಾಗಿತ್ತು. ಸಂವಿಧಾನದ ಕೇಂದ್ರ ಪ್ರಜ್ಞೆಯು ಮೂರು ನೆಲೆಗಳಲ್ಲಿ ಅಸ್ತಿತ್ವಕ್ಕೆ ಬಂದಿದೆ. ಜಾತ್ಯಾತೀತವಾದ ನೆಲೆ, ಸಾಮಾಜಿಕ ನ್ಯಾಯ ಹಾಗೂ ಮಾನವೀಯತೆಯ ಸಮಷ್ಟಿ ಪ್ರಜ್ಞೆ. ಆದರೆ ಪಾರಂಪರಿಕವಾಗಿ ಅಸ್ತಿತ್ವದಲ್ಲಿದ್ದ ಮೇಲು-ಕೀಳು ಎಂಬ ಜಾತಿ ಭೇದವು, 'ಸಮಾನತಾ ತತ್ವ' ಘೋಷಿತವಾದ ಕೂಡಲೇ ಜನಜೀವನ ವಾಸ್ತವ ಅನುಷ್ಠಾನಕ್ಕೆ ಬರುವುದು ಸಾಧ್ಯವಾಗಲಿಲ್ಲ. ಭಾರತದ ರಾಜಕಾರಣಿಗಳು ಜಾತಿ ಆಧಾರದ ಮೇಲಿನ ಅಧಿಕಾರ ಸೌಲಭ್ಯವನ್ನು ವಿರೋಧಿಸುತ್ತ ಪಕ್ಷಗಳ ಅಸ್ತಿತ್ವವನ್ನು, ಅಧಿಕಾರದ ಅಸ್ತಿತ್ವವನ್ನು ಜಾತಿ ನೆಲೆಗಳಲ್ಲಿ ಗುರುತಿಸಿಕೊಳ್ಳಲು ಪ್ರಾರಂಭಿಸಿದರು.

ಜಾತಿ ಶ್ರೇಣಿಕೃತ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯರನ್ನೆಂದೂ ಸಮನಾಗಿ ಕಂಡಿಲ್ಲ. ಸ್ವತಂತ್ರವಾಗಿ ಬದುಕುವ ತಮ್ಮ ಜೀವನದ ಬಗ್ಗೆ ತೀರ್ಮಾನ ತೆಗೆದುಕೊಳ್ಳುವ ಅವಕಾಶವನ್ನೇ ಮಹಿಳೆಯರಿಗೆ ನೀಡದಿರುವ ಸಾಮಾಜಿಕ ವ್ಯವಸ್ಥೆ ಪುರಾತನ ಕಾಲದಿಂದಲೂ ಬಂದಿದೆ. ಮಹಿಳೆಯ ಶ್ರಮ, ದುಡಿಮೆ, ಪಾಲನೆ-ಪೋಷಣೆ, ನೀರುತರುವ, ಕಳೆ ಕೀಳುವ, ಬೆಳೆ ಕೊಯ್ಯುವ, ಧಾನ್ಯ ಸ್ವಚ್ಛಗೊಳಿಸುವುದನ್ನು ಸಂಪನ್ಮೂಲ ಕೆಲಸಗಳೆಂದು ಪುರುಷ ನಿರ್ಮಿತ ವ್ಯವಸ್ಥೆ ಗುರುತಿಸಲೇ ಇಲ್ಲ.

ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯ ಸ್ವಾವಲಂಬನೆಯ ಸಾಧ್ಯತೆಗಳು ವರಮಾನದ ಭಾಗವಾಗಿ ಪರಿಗಣಿತವಾಗಲಿಲ್ಲ. ಮಹಿಳೆಯರು ಶಿಕ್ಷಣ ಕಲಿಯುವುದೇ ಅಪರಾಧವಾಗಿತ್ತು. ಶಿಕ್ಷಣ ಕಲಿತ ಮಹಿಳೆ ಕುಟುಂಬದ ಜವಾಬ್ದಾರಿಯನ್ನು ನಿರಾಕರಿಸುವುದರೊಂದಿಗೆ ಸಮಾಜದಲ್ಲಿನ ರೂಢಿ, ಪರಂಪರೆಯನ್ನು ಪ್ರಶ್ನಿಸುತ್ತಾಳೆಂಬ ಭಯವಿತ್ತು. ಆದರೆ ವಸಾಹತುಶಾಹಿ ಆಡಳಿತದ ಪರಿಣಾಮದಿಂದ ಅನೇಕ ಭಾರತೀಯ ಚಿಂತಕರು, ಲೇಖಕರು, ಸಮಾಜ ಸುಧಾರಕರು ಮಹಿಳಾಶಿಕ್ಷಣ ಮಹತ್ವವನ್ನು ತಿಳಿಸತೊಡಗಿದರು.

ಶಿಕ್ಷಣ ಪಡೆದ ಮಹಿಳೆಯರು ತಮ್ಮ ಜ್ಞಾನದ ಮೂಲಕ ಸಮಾಜದ ಪೂರ್ವಗ್ರಹ ಪೀಡಿತ ವಿಚಾರಗಳನ್ನು ವಿರೋಧಿಸಹತ್ತಿದರು. ಮಹಿಳೆಯರ ಸಮಸ್ಯೆಗಳನ್ನು ಗುರುತಿಸುವ ನಿಟ್ಟಿನಲ್ಲಿ, ಅನೇಕ ಯೋಜನೆಗಳು ಕಾರ್ಯರೂಪಕ್ಕೆ ಬರತೊಡಗಿದವು. ಮಹಿಳಾ ಶಾಲೆ, ಕಾಲೇಜು, ವಿಶ್ವವಿದ್ಯಾಲಯ, ಮಹಿಳಾ ಸಂಘ-ಸಂಸ್ಥೆಗಳು ಮಹಿಳೆಯರಿಗಾಗಿ ಪ್ರಾರಂಭವಾದವು.[೨] ಶಿಕ್ಷಿತ ಮಹಿಳೆಯರು ಸಮಾಜದಲ್ಲಿ ಬೇರೂರಿರುವ ಮೂಢನಂಬಿಕೆ, ಲಿಂಗಭೇದ ಚಟುವಟಿಕೆಗಳನ್ನು ಗುರುತಿಸಿ, ತಮ್ಮ ಹಕ್ಕುಗಳ ಬಗ್ಗೆ ಪ್ರಶ್ನಿಸತೊಡಗಿದರು. ಸ್ವಯಂ ಉದ್ಯೋಗ, ವಾಣಿಜ್ಯ-ವ್ಯಾಪಾರ, ಸರ್ಕಾರಿ ಕಛೇರಿ, ಬ್ಯಾಂಕು, ಶಿಕ್ಷಣ ಕೇಂದ್ರಗಳಲ್ಲಿ ಪಾಲ್ಗೊಳ್ಳತೊಡಗಿದರು. ಮಹಿಳಾ ಶಿಕ್ಷಣ ಮತ್ತು ಮಹಿಳೆಯ ಉದ್ಯೋಗ ವಿಚಾರಗಳಲ್ಲಿ ತೋರಿದ ಸಾಂಪ್ರದಾಯಿಕ ನಿಲುವು ರಾಜಕೀಯ ಪ್ರವೇಶದ ಸಂದರ್ಭದಲ್ಲೂ ಕಂಡುಬಂದಿತು. ಪ್ರಗತಿಪರರು, ಸಮಾಜಸುಧಾರಕರು, ಚಿಂತಕರು ಮಹಿಳೆ ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದನ್ನು ಒಪ್ಪಿಕೊಂಡರೂ ಅದು ಪುರುಷ ಪ್ರಧಾನ ರಾಜಕೀಯ ಅರ್ಥ ಹಾಗೂ ಪ್ರಕ್ರಿಯೆಯನ್ನೇ ಮುಂದುವರೆಸುವ ಭಾಗವಾಯಿತು.

೧೯೭೦ರ ದಶಕದಲ್ಲಿ ವಿಚಾರಗಳು, ಸಂವಾದಗಳು ರಾಷ್ಟ್ರ-ಅಂತರಾಷ್ಟ್ರೀಯ ಮಟ್ಟದಲ್ಲಿ ಚರ್ಚಿತವಾಗತೊಡಗಿದವು. ಪಾಶ್ಚಿಮಾತ್ಯ ಮಹಿಳಾ ಸಂಘಟನೆಗಳು 'ಮಹಿಳೆಯರ ರಾಜಕೀಯ ಪ್ರಜ್ಞೆಯ ವಿಸ್ತಾರ', 'ಮಹಿಳಾ ಜಾಗೃತಿ' ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ರಾಷ್ಟ್ರ-ರಾಷ್ಟ್ರಗಳ ಮಹಿಳೆಯರ ಸಮಸ್ಯೆಗಳನ್ನು ಅವರ ಅಸ್ತಿತ್ವವನ್ನು, ಹಕ್ಕು ಸ್ವಾತಂತ್ರ್ಯವನ್ನು ಚರ್ಚಿಸತೊಡಗಿದವು. ಇದರಿಂದಾಗಿ ಭಾರತೀಯ ಮಹಿಳೆಯರಲ್ಲಿ ಆತ್ಮವಿಶ್ವಾಸ ಹೆಚ್ಚಿಸತೊಡಗಿತು. ಮಹಿಳೆಯರ ಸ್ಥಾನಮಾನ ಕುರಿತು ನಡೆದ ಅಧ್ಯಯನಗಳು, ಚರ್ಚೆಗಳು, ಅಂತರಾಷ್ಟ್ರೀಯ ಮಹಿಳೆಯರ ಹೇಳಿಕೆಗಳು, ಪುರುಷಶಾಹಿ ವ್ಯವಸ್ಥೆಯನ್ನು ಪ್ರಶ್ನಿಸುವ, ಬದಲಿಸುವ ಪ್ರಕ್ರಿಯೆಗೆ ಕಾರಣವಾದವು. ಪ್ರಜಾಪ್ರಭುತ್ವದ ಆಧಾರ ಸ್ಥಂಭಗಳಾದ ಸ್ವಾತಂತ್ರ್ಯ, ಸಮಾನತೆ ಹಾಗೂ ಸಾಮಾಜಿಕ ನ್ಯಾಯ, ಹುದ್ದೆ, ಅಧಿಕಾರಗಳು ಲಿಂಗಸೂಚಿ ಭಾಷೆಗಳಾಗಿರುವುದನ್ನು ಮಹಿಳೆಯರು ಪ್ರತಿಭಟಿಸತೊಡಗಿದರು.

ಮಹಿಳಾ ಮೀಸಲಾತಿ ಗುರಿ ಏನು?ಇದು ಮಹಿಳಾ ಸಬಲೀಕರಣಕ್ಕೆ ದಾರಿ ಮಾಡಿಕೊಡುತ್ತದೆಯೇ? ಎಂಬ ಪ್ರಶ್ನೆಗಳು ಮಹಿಳಾ ಮೀಸಲಾತಿ ವಿಧೇಯಕ ಮಂಡನೆಗೆ ಹೆಚ್ಚು ಮಹತ್ವವನ್ನು ಕಲ್ಪಿಸಿದವು. ಸಂವಿಧಾನದತ್ತವಾದ ಹಕ್ಕುಗಳು ಔಪಚಾರಿಕ ಹಕ್ಕುಗಳಾಗಿರದೇ, ಸಮಾಜದ ರಾಜಕೀಯ ಕ್ಷೇತ್ರದಲ್ಲಿರುವ ಅಸಮಾನತೆಯನ್ನು ಹೋಗಲಾಡಿಸುವ ಮೂಲಕ ಮಹಿಳೆಯರಿಗೆ ನೀಡುವ ವಿಶೇಷ ಸೌಲಭ್ಯಗಳೇ ಮಹಿಳಾ ಮೀಸಲಾತಿಯೆನಿಸಿತು. ಸಮಾಜದಲ್ಲಿ ಶೋಷಿತರಾದ. ಅಂಚಿನಲ್ಲಿರುವ. ದ್ವಿತೀಯ ದರ್ಜೆಯ ಮಹಿಳೆಯ ಕಿತ್ತುಕೊಂಡ ಹಕ್ಕುಗಳನ್ನು ಹಿಂತಿರುಗಿಸುವ ಪ್ರಕ್ರಿಯೆ ಮಹಿಳಾ ಮೀಸಲಾತಿ ಉದ್ದೇಶವಾಯಿತು.

ಅಸಮಾನ, ಸಮಾಜದ ಅಂಚಿನಲ್ಲಿರುವ ದುರ್ಬಲರಿಗೆ ಅವಕಾಶ ದಕ್ಕುವಂತೆ ಮಾಡುವುದು ಹಾಗೂ ಪ್ರಬಲರು ಎಲ್ಲಾ ಅವಕಾಶಗಳನ್ನು ತಾವೇ ದಕ್ಕಿಸಿಕೊಳ್ಳದಂತೆ, ಕಾನೂನಿನ ಮೂಲಕ ನಿಯಂತ್ರಿಸುವುದೇ ಮಹಿಳಾ ಮೀಸಲಾತಿಯ ಗುರಿಯಾಯಿತು. ಸಮಾನತೆಯ ಆಶಯವುಳ್ಳ ಸಮಾಜ ನಿರ್ಮಾಣವಾಗಬೇಕು, ಸಮಾಜದಲ್ಲಿ ರೂಢಿಗತವಾಗಿರುವ ದ್ವಂದ್ವ ನೀತಿ ಬದಲಾಗಬೇಕು, ರಾಷ್ಟ್ರ-ರಾಜ್ಯದ ಮುಖ್ಯ ಅಧಿಕಾರ ಕೇಂದ್ರದ ಭಾಗವಾಗಿ ರಾಷ್ಟ್ರ ಯೋಜನೆ ರೂಪಿಸುವ ಕಾರ್ಯದಲ್ಲಿ ಮಹಿಳೆಯರು ಭಾಗಿಯಾಗಬೇಕು ಎಂಬುದು ಮಹಿಳೆಯರ ಒತ್ತಾಸೆಯಾಯಿತು.



ಸಮಾನತೆ, ಸ್ವಾತಂತ್ರ್ಯ, ಹಕ್ಕುಗಳು ಮಹಿಳೆಯರನ್ನು ಸಶಕ್ತಳನ್ನಾಗಿ ಮಾಡಿ ಮಹಿಳೆಗೆ ಸಾಮಾಜಿಕ ನ್ಯಾಯ ಒದಗಿಸುವಲ್ಲಿ ಪೂರಕವಾಗಿ ಕೆಲಸ ಮಾಡುತ್ತವೆ. ಶತಮಾನಗಳಿಂದ ತಮ್ಮದೆಂದು ಹೇಳಿಕೊಂಡು ಬಂದಿರುವ, ಪುರುಷರಿಗೆ ಮಾತ್ರ ಮೀಸಲಾಗಿವೆಯೆಂದು ಭಾವಿಸಿರುವ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಅವಕಾಶ ದೊರೆತಾಗಲೆಲ್ಲ ಮಹಿಳೆಯರು ಭಾಗವಹಿಸಿ ಯಶಸ್ವಿಯಾಗಿದ್ದಾರೆ. ಉನ್ನತ ರಾಜಕೀಯ ಹುದ್ದೆಗಳಿಗೆ ಸಂಬಂಧಿಸಿದಂತೆ ಅವಕಾಶಗಳು ತಂದೆ ಅಥವಾ ಗಂಡನ ಸಾವಿನ ಮೂಲಕವಾಗಿ ಬಂದಾಗಲೂ ಮಹಿಳೆಯರು ರಾಜಕೀಯ ಪ್ರವೇಶಿಸಿ, ನಂತರದಲ್ಲಿ ತಮ್ಮ ಸ್ವ-ಸಾಮರ್ಥ್ಯ. ಕಾರ್ಯದಕ್ಷತೆ ಮೂಲಕ ಯಶಸ್ಸು ಸಾಧಿಸಿದ್ದಾರೆ. ಮಹಿಳೆಯರಿಗೆ ಸಿಗಬೇಕಾದ ಹಕ್ಕು ಅವಕಾಶಗಳ ಬಗ್ಗೆ ವಿದ್ವಾಂಸರು ಸಾರ್ವಜನಿಕ ಚರ್ಚೆ ನಡೆಸಹತ್ತಿದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರು ಸಾವಿರಾರು ಸಂಖ್ಯೆಯಲ್ಲಿ ಔಪಚಾರಿಕ ಅಥವಾ ಅನೌಪಚಾರಿಕವಾಗಿ ಭಾಗವಹಿಸಿದ್ದು ಸ್ವ-ಪ್ರೇರಣೆಯಿಂದ. ಆಗ ಮಹಿಳೆಯರು ತೋರಿದ ಧೈರ್ಯ, ಸಾಹಸವನ್ನು ಅವರ ಸಂಘಟನಾ ಶಕ್ತಿಯನ್ನು ಒಪ್ಪಿಕೊಂಡ ಪುರುಷ ಪ್ರಧಾನ ರಾಜಕೀಯ ವ್ಯವಸ್ಥೆ ಇದೀಗ ಮಹಿಳೆಯ ರಾಜಕೀಯ ಪ್ರವೇಶದ ಕುರಿತು ಅಪಸ್ವರವೆತ್ತುತ್ತಿದೆ.

೧೯೮೦ ರ ವರೆಗೆ ಮಹಿಳಾ ಮೀಸಲಾತಿ ಪರವಾದ ವಿಶೇಷ ಒಲವು ರಾಜಕೀಯ ಪಕ್ಷಗಳಿಗೆ ಇರಲಿಲ್ಲವಾದರೂ 'ಸಮಾನತೆಯೆಡೆಗೆ' ವರದಿಯು ಮಹಿಳೆಯರ ರಾಜಕೀಯ ಅವಕಾಶ ವಿಸ್ತಾರಗೊಳ್ಳುವ ಬಗ್ಗೆ ಬೆಂಬಲಿಸಿತ್ತು.[೩] ಇಂತಹ ವಾತಾವರಣದಲ್ಲಿ ಕರ್ನಾಟಕ ರಾಜ್ಯವು ೧೯೮೩ ರಲ್ಲಿ ಪಂಚಾಯತ್ ರಾಜ್ ಮಸೂದೆಗೆ ತಿದ್ದುಪಡಿ ತರುವ ಮೂಲಕ ಶೇಕಡ ೨೫ ರಷ್ಟು ಸ್ಥಾನವನ್ನು ಮಹಿಳೆಯರಿಗೆ ಮೀಸಲಾಗಿಡುವ ಕ್ರಾಂತಿಕಾರಿ ಕ್ರಮ ಕೈಗೊಂಡಿತು. ಪಂಚಾಯತ್‌ರಾಜ್‌ಗಳಿಗೆ ಅಧಿಕಾರ ವಿಕೇಂದ್ರಿಕರಣಗೊಳ್ಳಬೇಕಾದರೆ ಅದರಲ್ಲಿ ಮಹಿಳೆಯರಿಗೆ ಅವಕಾಶ, ಸ್ವಾತಂತ್ರ್ಯವಿರಬೇಕು ಎಂಬುದು ಇದರ ಹಿಂದಿನ ಸೈದ್ಧಾಂತಿಕತೆಯಾಗಿತ್ತು. ಇದರ ಪ್ರೇರಣೆಯಿಂದ ೧೯೯೩ ರಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ ೩೩.೩೩ ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ, ಹಿಂದುಳಿದವರಿಗೆ ನೀಡಬೇಕೆಂದು ಸಂವಿಧಾನದ ೭೩ ಹಾಗೂ ೭೪ ರ ತಿದ್ದುಪಡಿಯಲ್ಲಿ ತಿಳಿಸಲಾಯಿತು. 'ಮೀಸಲಾತಿಯಡಿ ಮಹಿಳಾ ಸಶಕ್ತೀಕರಣ' ದ ಪರಿಕಲ್ಪನೆಯ ನಿಟ್ಟಿನಲ್ಲಿ ಅಂಚಿನಲ್ಲಿರುವ ತಳಮಟ್ಟದವರಿಗೆ ಪ್ರಾಶಸ್ತ್ಯ ಕೊಡಬೇಕೆನ್ನುವ ದೃಷ್ಟಿಯಿಂದ ಮಹಿಳೆಯರಿಗೆ ಅದರಲ್ಲೂ ತಳಸಮುದಾಯದ ಮಹಿಳೆಯರಿಗೆ ಅವಕಾಶ ಕಲ್ಪಿಸಲಾಯಿತು. ವಿಕೇಂದ್ರಿಕರಣದ ಪರಿಕಲ್ಪನೆಯಿಂದ ಗ್ರಾಮೀಣ ಜನರಿಗೆ ಅಧಿಕಾರ ರಾಜಕಾರಣ ದೊರಕಿತು. ಮಹಿಳೆ ಅಧಿಕಾರ ರಾಜಕಾರಣದ ಪಾಲುದಾರಳಾಗಿ ಭಾಗಿಯಾಗಲು ಮೀಸಲಾತಿ ಸಹಾಯಕವಾಯಿತು.

ಗ್ರಾಮಪಂಚಾಯತ್ ಕುರಿತು ಹಲವಾರು ಆರೋಪಗಳು ಕೇಳಿಬರುತ್ತಿವೆ. 'ಮಹಿಳಾ ಮೀಸಲಾತಿ' ಅಡಿಯಿಂದ ಅಧ್ಯಕ್ಷ-ಉಪಾಧ್ಯಕ್ಷ ಹಾಗೂ ಸದಸ್ಯೆಯರ ಪ್ರವೇಶವಾಗುತ್ತಿರುವುದು ಸ್ವಪ್ರೇರಣೆಯಿಂದಲ್ಲ, ಅವರಿಗೆ ರಾಜಕೀಯ ಅನುಭವವಿಲ್ಲ, ಅವರ ಪರವಾಗಿ ಅವರ ಗಂಡ ಅಧಿಕಾರ ಚಲಾಯಿಸುತ್ತಾನೆ, ಶಿಕ್ಷಣ ಅರ್ಹತೆಯಿಲ್ಲ ಎಂಬ ಆರೋಪಗಳಿವೆ.[೪] ಗ್ರಾಮ ಸಮಾಜ ನಿರಂತರವಾಗಿ ಬದಲಾಗುತ್ತಿರುತ್ತದೆ. ಗ್ರಾಮದ ಅಭಿವೃದ್ಧಿ ಕಾರ್ಯಗಳಲ್ಲಿ ಮಹಿಳೆಯರ ಪಾತ್ರ ಪ್ರಶಂಸನೀಯ. ಗ್ರಾಮ ಪಂಚಾಯತಿಯಲ್ಲಿ 'ಮೀಸಲಾತಿ' ಮೂಲಕ ಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರು ಭಾಗವಹಿಸಲು ಆಸಕ್ತರಾಗಿದ್ದರೂ ಪಿತೃ ಪ್ರಧಾನ ವ್ಯವಸ್ಥೆ ಮಹಿಳೆ ರಾಜಕೀಯದಲ್ಲಿ ಮುಂದುವರೆಯದಂತೆ ತಂತ್ರಗಳನ್ನು ರೂಪಿಸುತ್ತಿರುತ್ತದೆ. ಅನಕ್ಷರಸ್ಥ ಮಹಿಳೆಯರಲ್ಲಿ ರಾಜಕೀಯ ಪ್ರಜ್ಞೆ, ಆತ್ಮ ವಿಶ್ವಾಸ ಕೊರತೆಯಿದೆ ಎಂಬ ಹೇಳಿಕೆಗಳು ಪೂರ್ವಾಗ್ರಹ ಪೀಡಿತವಾದವುಗಳು. ತೀವ್ರಗತಿಯಲ್ಲಿ ಬದಲಾಗುತ್ತಿರುವ ಸಮಾಜದಲ್ಲಿ ಮಹಿಳೆಯರಿಗೆ ಸಿಗಬಹುದಾದ ಒಂದು ಅವಕಾಶ ಅವರ ಬದುಕಿನಲ್ಲಿ ದೊಡ್ಡ ಬದಲಾವಣೆಯನ್ನೇ ತರುತ್ತದೆನ್ನುದಕ್ಕೆ ಉದಾಹರಣೆ: ಗ್ರಾಮಪಂಚಾಯತಿ. ಮಹಿಳೆ ಇದರ ಮೂಲಕ ರಾಜಕೀಯಕ್ಕೆ ಬರುವುದರಿಂದ ಸಾಮಾಜಿಕ ಅನಿಷ್ಠಗಳನ್ನು ನಿಷೇಧಿಸಲು ಹೋರಾಡುವಂತಹ ಆತ್ಮವಿಶ್ವಾಸ ಪಡೆದಿರುವಳು. ಈ ಹೋರಾಟದ ಮನೋಭಾವನೆಗಳು ಇಂದಿನ ಸಾರಾಯಿ ನಿಷೇಧ, ಬಾಲ್ಯವಿವಾಹ ನಿಷೇಧ ಬೇಡಿಕೆಗಳಿಗೆ ರಾಜಕೀಯ ಬೆಂಬಲ ದೊರಕುವಂತೆ ಮಾಡುತ್ತಿದೆ.

ಕೌಟುಂಬಿಕ ಚೌಕಟ್ಟಿನಿಂದ ಹೊರಬಂದು ಮಹಿಳೆ ಆತ್ಮವಿಶ್ವಾಸದಿಂದ ಗ್ರಾಮ ಅಭಿವೃದ್ಧಿ ಕಾರ್ಯಗಳಲ್ಲಿ ಭಾಗವಹಿಸುತ್ತಾಳೆ. ಅವಳಲ್ಲಿ ಸಹಜವಾಗಿರುವ ಪ್ರತಿಭೆ, ಕಲೆ, ಕಾರ್ಯದಕ್ಷತೆ, ಮೋಸವಿರದ ನಿರ್ಣಯ, ಸ್ವಚ್ಛ ರಾಜಕಾರಣದ ವಿಕಸನಕ್ಕೆ ಸಹಕಾರಿಯಾಗಿದೆ. ಮಹಿಳೆ ಯಾವುದೇ ರಂಗದಲ್ಲಿ ಭಾಗವಹಿಸಿದರೂ, ಏಕಾಗ್ರತೆ, ನಿಷ್ಠೆಯಿಂದ ಭಾಗವಹಿಸುತ್ತಾಳೆ. ಗ್ರಾಮ, ತಾಲೂಕು ಹಾಗೂ ಜಿಲ್ಲಾ ಪಂಚಾಯತಿಗಳಲ್ಲಿ ಆರಂಭದಲ್ಲಿ ಮಹಿಳೆಯರು ಪುರುಷ ಸದಸ್ಯರ ತಾತ್ಸಾರ, ಉದಾಸೀನ ಅಥವಾ ಸಹಾನುಭೂತಿ ಪಡೆಯುತ್ತಿದ್ದವರು, ಇದೀಗ ಆತ್ಮವಿಶ್ವಾಸದಿಂದ ಸಭೆಗಳಲ್ಲಿ, ಸಮಾರಂಭಗಳಲ್ಲಿ ಮತ್ತು ನೀತಿ-ನಿರೂಪಣೆ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಿರುವರು.

ಮಹಿಳೆಯರ ಗ್ರಾಮ ಪಂಚಾಯತಿಯ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಿಕೆ ಅವರ (ಗ್ರಾಮದ ಮಹಿಳೆಯರ) ಜೀವನದಲ್ಲಿ ಅಲ್ಪಸ್ವಲ್ಪ ಬದಲಾವಣೆ, ಸುಧಾರಣೆ ತಂದಿದೆ. ವೈಯಕ್ತಿಕ ನೆಲೆಯಲ್ಲಿ ಚುನಾಯಿತರಾದ ಮಹಿಳೆಯರು ಆತ್ಮಸ್ಥೈರ್ಯವನ್ನು ಬೆಳೆಸಿಕೊಂಡು ಸಮಾಜದ ಎಲ್ಲಾ ವರ್ಗಗಳೊಂದಿಗೆ ಬೆರೆತು, ಜ್ಞಾನಮಟ್ಟವನ್ನು ಹೆಚ್ಚಿಸಿಕೊಂಡಿದ್ದಾರೆ ಎಂಬುದನ್ನು ನನ್ನ ಕ್ಷೇತ್ರಕಾರ್ಯದಿಂದ ತಿಳಿದಿದೆ. ಇವರ ಪ್ರವೇಶದಿಂದಾಗಿ, ಇದುವರೆಗಿನ ರಾಜಕೀಯ ಅಧಿಕಾರ ಸಂರಚನೆ ಪುನರ್ ವಿಮರ್ಶೆಯಾಗುತ್ತಿದೆ. ರಾಜಕಾರಣಕ್ಕೆ ತಮ್ಮದೇ ಆದ ಮೌಲ್ಯ, ಆದ್ಯತೆ ನೀಡಿದ್ದ ಪುರುಷರ ಚಿಂತನೆ ಮಹಿಳಾ ಚಿಂತನೆಯೊಂದಿಗೆ ಮುಖಾಮುಖಿಯಾಗುತ್ತಿದೆ. ಚುನಾವಣಾ ಪ್ರವೇಶ ಪುರುಷ ಮೂಲದಿಂದಾಗಿದ್ದರೂ, ನಂತರದಲ್ಲಿ ಸ್ವ-ಆಸಕ್ತಿ, ಧೈರ್ಯ, ಯೋಜನಾಶಕ್ತಿಯನ್ನು ಅವಲಂಬಿಸುತ್ತದೆ.

ಗ್ರಾಮಗಳಲ್ಲಿದ್ದ ಮೂಲಭೂತ ಸಮಸ್ಯೆಗಳ ನಿವಾರಣೆಗೆ ಮಹಿಳಾ ಜನಪ್ರತಿನಿಧಿಗಳು ಪ್ರಯತ್ನಿಸುತ್ತಿದ್ದಾರೆ. ಪುರುಷರು ನಿರ್ವಹಿಸುತ್ತಿದ್ದ ಕಾರ್ಯಗಳಲ್ಲಿ ಮಹಿಳೆ ಅಮೂಲಾಗ್ರ ಬದಲಾವಣೆ ತಂದು ಗ್ರಾಮೀಣ ಸುಧಾರಣೆಗೆ ಕಾರಣವಾಗಿರುವಳು. ಗ್ರಾಮೀಣ ಯೋಜನೆಯಲ್ಲಿದ್ದ ಅವ್ಯವಹಾರಗಳಿಗೆ ತಕ್ಕಮಟ್ಟಿನ ಕಡಿವಾಣ ಬಿದ್ದಿದೆ. ನೈರ್ಮಲ್ಯೀಕರಣಕ್ಕೆ ಮಹಿಳೆ ಹೆಚ್ಚು ಆದ್ಯತೆ ಕೊಡುತ್ತಿರುವಳು. ಇದರಿಂದ ಮಹಿಳಾ ಆದ್ಯತಾವಲಯಗಳನ್ನು ಗುರುತಿಸುವಂತಾಯಿತು.

೧೯೯೩ರ ಸಂವಿಧಾನ ತಿದ್ದುಪಡಿಯಂತೆ ಭಾರತದಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿದ ನಂತರ ಸ್ವಾಭಾವಿಕ ಮುಂದುವರಿಕೆಯಾಗಿ ರಾಜ್ಯ-ರಾಷ್ಟ್ರ ಶಾಸಕಾಂಗಗಳಲ್ಲಿ ಮೀಸಲಾತಿ ಕಲ್ಪಿಸುವದರ ಬಗ್ಗೆ ಮಹಿಳೆಯರು ಆಸಕ್ತಿ ತೋರಲಾರಂಭಿಸಿದರು.[೫೧] ಮಹಿಳೆಯ ಅವಕಾಶಗಳ ಬಗ್ಗೆ ಉದಾರವಾಗಿ ಮಾತನಾಡುತ್ತಲೇ ಆಕೆಯನ್ನು ಉಪೇಕ್ಷಿಸುವ ಬಗ್ಗೆ ಪ್ರಶ್ನಿಸಲಾಯಿತು. ಅಪರೂಪವಾಗಿ ದೊರೆಯುವ ಅವಕಾಶವು ಪುರುಷ ಪ್ರಧಾನ ಸಮಾಜದ ದಯೆಯಾಗಿ ಮಹಿಳೆ

ರಾಜಕಾರಣದ ಪ್ರತಿನಿಧಿಯಾಗಿ ವರ್ತಿಸಲು ಬಿಡುವುದಿಲ್ಲ. ಅಲ್ಪಸಂಖ್ಯಾತ ಮಹಿಳಾ ರಾಜಕಾರಣಿಗಳು ಪುರುಷರಿಗಿಂತ ಭಿನ್ನವಾಗಿ ತಮ್ಮನ್ನು ರೂಪಿಸಿಕೊಳ್ಳಲು ಸವಾಲನ್ನು ಸ್ವೀಕರಿಸಿದವರಾಗಿದ್ದಾರೆ.

ಮಹಿಳೆಯರ ಹಿತವನ್ನು ಗಮನದಲ್ಲಿಟ್ಟುಕೊಂಡು ಲೋಕಸಭೆ–ವಿಧಾನಸಭೆಯ ಒಟ್ಟು ಸದಸ್ಯರ ಸ್ಥಾನಗಳಲ್ಲಿ ಮಹಿಳೆಯರಿಗೆ ಶೇಕಡ ೩೩.೩೩ ರಷ್ಟು ಮೀಸಲಿಡಬೇಕೆಂಬ ಒತ್ತಾಯ ತರಲಾರಂಭಿಸಿದರು. ಮಹಿಳೆಯರನ್ನು ರಾಜಕೀಯ ಅಧಿಕಾರ ಕಕ್ಷೆಗೆ ತರುವ ಪ್ರಕ್ರಿಯೆಗೆ ಈ ಒತ್ತಾಯ ಒತ್ತಾಸೆಯಾಯಿತು. ರಾಜಕೀಯ ಕ್ಷೇತ್ರದಲ್ಲಿ ಮಹಿಳೆ ಉಳಿಯಬೇಕೆಂದರೆ ಮೀಸಲಾತಿ ಬೇಕು. ಶುದ್ಧ, ಸರಳ, ನಿರ್ಭಯ ಚುನಾವಣೆ ನಡೆಯಬೇಕಾದರೆ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ಭಾಗವಹಿಸಬೇಕು. ಸಾರಾಯಿ, ಹಣ, ಗುಂಡಾಗಿರಿ, ಕೋಮುವಾದಗಳಿಗೆ ಮಹಿಳೆ ಎಂದೂ ಹತ್ತಿರವಾಗಿಲ್ಲ. ಮಹಿಳೆಯರು ಹಿಂಸೆ, ಮೋಸ–ವಂಚನೆಯಿಂದ ದೂರವಿರುತ್ತಾರೆ. ಇಡೀ ಭಾರತ ದೇಶದ ಚುನಾವಣಾ ವೆಚ್ಚ ಉಳಿದ ದೇಶಗಳಿಗಿಂತ ಹೆಚ್ಚು. ಚುನಾವಣೆಯಲ್ಲಿ 'ಬಡವರಿಗೆ ಸಹಾಯ' ಎಂಬ ಹೆಸರಿನಲ್ಲಿ ನಡೆವ ಲಂಚ, ಸಾರಾಯಿ, ಹಣ ಉಳಿದ ದೇಶಗಳಿಗಿಂತ ಹೆಚ್ಚು. ಎಲ್ಲಿ ಮಹಿಳಾ ಅಭ್ಯರ್ಥಿಗಳಿರುತ್ತಾರೊ ಅಲ್ಲಿ ಮತದಾರರಲ್ಲಿ ನಿವೇದನೆ, ಆಶ್ವಾಸನೆ, ಮುಂಬರುವ ಭವಿಷ್ಯತ್ತಿನ ಯೋಜನೆಗಳ ವರದಿಗಳಿರುತ್ತವೆ. ಮಹಿಳೆಯ ನೇತೃತ್ವದಲ್ಲಿ ರೂಪಗೊಳ್ಳುವ ಕಾರ್ಯಚಟುವಟಿಕೆಗಳು ಪುರುಷರಿಗಿಂತ ಭಿನ್ನವಾಗಿರುತ್ತವೆ.

ಚುನಾವಣೆಯಲ್ಲಿ ರಾಜಕೀಯ ಪಕ್ಷಗಳ ಪಾತ್ರ ಮುಖ್ಯವಾದುದು. ಆದರೆ ರಾಜಕೀಯ ಪಕ್ಷಗಳು ಪಿತೃಪ್ರಧಾನತೆಯ Agent ಆಗಿ ಕಾರ್ಯ ಮಾಡುತ್ತಿರುವವು. ಮಹಿಳೆಯನ್ನು ಸಮಾಜದ, ಅಧಿಕಾರದ ಮುಖ್ಯವಾಹಿನಿಗೆ ತರಬೇಕೆಂಬ ಒತ್ತಾಯ ಮಹಿಳಾ ಸಂಘ–ಸಂಸ್ಥೆಗಳಿಂದ ಬಂದಿತು. ಮಹಿಳೆಯನ್ನು 'ವೋಟ್ ಬ್ಯಾಂಕ್' ಆಗಿ ಪರಿಗಣಿಸುವ ರಾಜಕೀಯ ಪಕ್ಷಗಳು ಮಹಿಳಾ ಮೀಸಲಾತಿಯನ್ನು ವಿರೋಧಿಸಹತ್ತಿದವು. ವಿಶ್ವದ ಮಹಿಳೆಯರು ಶಾಸನ ರೂಪಿಸುವ ಪ್ರಕ್ರಿಯೆಯಲ್ಲಿನ ಭಾಗವಹಿಸುವಿಕೆಗೆ ಒತ್ತಾಯಿಸಲಾರಂಭಿಸಿದರು. ಮಹಿಳೆಯರ ಒತ್ತಾಯದ ಮೇರೆಗೆ ೧೯೯೬ ರ ಸೆಪ್ಟೆಂಬರ್ ೧೨ ರಂದು 'ಮಹಿಳಾ ಮೀಸಲಾತಿ' ವಿಧೇಯಕವನ್ನು ಲೋಕಸಭೆಯಲ್ಲಿ ಸಂವಿಧಾನದ ೮೧ ನೇ ತಿದ್ದುಪಡಿ ಮಸೂದೆ ಅನ್ವಯ ಮಂಡಿಸಲಾಯಿತು. ಚುನಾವಣೆ ಮುಂಚೆ ರಾಜಕೀಯ ಪಕ್ಷಗಳು ಎಷ್ಟೇ ಭರವಸೆ ಕೊಟ್ಟಿದ್ದರೂ ಮಹಿಳಾ ಅಧಿಕಾರ ಹಂಚಿಕೆಯನ್ನು ಬಿಟ್ಟುಕೊಡಲು ನಿರಾಕರಿಸಿದರು. ಆ ವಿಷಯವನ್ನು ಮುಂದಕ್ಕೆ ಹಾಕಲು ಸೆಲೆಕ್ಟ್ ಸಮಿತಿಗೆ ತಿಳಿಸಲಾಯಿತು. ಗೀತಾ ಮುಖರ್ಜಿ ಸೆಲೆಕ್ಟ್ ಸಮಿತಿಯಲ್ಲಿದ್ದಿದ್ದರಿಂದ ಹೆಚ್ಚಿನ ಕಡಿತವಾಗಲಿಲ್ಲ.

ಪುರುಷ ರಾಜಕಾರಣಿಗಳು ಪಕ್ಷಭೇದ ಮರೆತು ಮಹಿಳಾ ಮೀಸಲಾತಿ ವಿಧೇಯಕವನ್ನು ವಿರೋಧಿಸಿದರು. ಪ್ರಾರಂಭದಲ್ಲಿ ಮಸೂದೆಗೆ ಪೂರ್ಣ ಬೆಂಬಲ ನೀಡಿದ್ದ ಸೋನಿಯಾ ಗಾಂಧಿ,

ನಂತರದಲ್ಲಿ ತಮ್ಮ ಬೆಂಬಲ ಹಿಂತೆಗೆದುಕೊಂಡರು. ಹಿಂದುಳಿದ ವರ್ಗಗಳ ಮಹಿಳೆಯರೊಂದಿಗೆ ಮುಸ್ಲಿಂ ಮಹಿಳೆಯರಿಗೂ ಪ್ರತ್ಯೇಕ ಮೀಸಲಾತಿ ನೀಡಬೇಕೆಂದು ಹಲವು ಪಕ್ಷಗಳು ಒತ್ತಾಯಿಸತೊಡಗಿದವು. ಪಂಚಾಯತ್ ಮತ್ತು ನಗರಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿದ ನಂತರ ಅದೇ ಮಾದರಿಯಲ್ಲಿ ಸಂವಿಧಾನ ತಿದ್ದುಪಡಿ ಮೂಲಕ ಲೋಕಸಭೆ ಮತ್ತು ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಶೇಕಡ ೩೩.೩೩ ಯಾಕೆ? ತಳಮಟ್ಟದ ರಾಜಕೀಯ ಅಧಿಕಾರದಲ್ಲಿರುವ ಮಹಿಳೆಯ ಭಾಗವಹಿಸುವಿಕೆ ಮುಂಮುವರಿಕೆಯಾಗಬೇಕೆ? ಎಂದೆಲ್ಲಾ ಪುರುಷ ಚಿಂತಕರ ಪ್ರಶ್ನೆಯಾಗಿತ್ತು.

ಆಡಳಿತರಂಗದಲ್ಲಿ ಯಾವುದೇ ಒಂದು ನಿರ್ಣಯ ತೆಗೆದುಕೊಳ್ಳಬೇಕಾದರೆ ೧/೩ ರಷ್ಟು ಬೆಂಬಲ ತೋರಿದಾಗ ಮಾತ್ರ ಆ ನಿರ್ಣಯಗಳು ಜಾರಿಗೆ ಬರುತ್ತವೆ. ಇಲ್ಲವಾದಲ್ಲಿ ಅವುಗಳನ್ನು ಮುಂದೂಡಲಾಗುತ್ತದೆ. ಹೀಗಾಗಿ ಪುರುಷ ರಾಜಕಾರಣಿಗಳ ಅಂತಿಮ ನಿರ್ಣಯಗಳನ್ನು ಕುಂಠಿತಗೊಳಿಸಲು ಮಹಿಳೆಯರು ೩೩ ಶೇಕಡ ಸ್ಥಾನಗಳನ್ನು ಪಡೆಯಲು ಮುಂದಾಗುತ್ತಾರೆ. ಲೋಕಸಭೆ ಅಥವಾ ವಿಧಾನಸಭೆಗಳಲ್ಲಿ ಯಾವುದೇ ಕಾಯ್ದೆ ಜಾರಿಗೊಳಿಸುವಲ್ಲಿ ನಿರ್ಣಯ ತೆಗೆದುಕೊಳ್ಳುವಲ್ಲಿ ಹಾಗೂ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬೇಕಾದರೆ ೧/೩ ರಷ್ಟು ಸದಸ್ಯರ ಬೆಂಬಲ ಬೇಕಾಗುತ್ತದೆ. ಆದಕಾರಣ ರಾಜಕೀಯದಲ್ಲಿ ಮಹಿಳೆ ಶೇಕಡ ೩೩.೩೩ ಸ್ಥಾನಗಳನ್ನು ಪಡೆಯಬೇಕು.

ಪುರುಷ ನಿರ್ಮಿತ ವ್ಯವಸ್ಥಿತ ಸಮಾಜದಲ್ಲಿ ಎಲ್ಲ ಜಾತಿ, ಧರ್ಮ, ವರ್ಗಗಳು ವಾಸ್ತವದಲ್ಲಿ ಪುರುಷ ಪ್ರಧಾನವೇ ಆಗಿವೆ. ಮೀಸಲಾತಿಯಿಂದ ಮಹಿಳೆಯರು ಒಂದು ಸಮೂಹವಾಗಿ ಸ್ಥಾಪಿಸಿಕೊಳ್ಳುತ್ತಾರೆ. ಲೋಕಸಭೆಯಲ್ಲಿರುವ ಪುರುಷ ಸಂಸದರು ಮೀಸಲಾತಿ ವಿಧೇಯಕವನ್ನು ಅಂಗೀಕರಿಸಿದಲ್ಲಿ ೧೮೧ ಮಹಿಳಾ ಸಂಸದರು ಅಧಿಕಾರ ಕೇಂದ್ರಕ್ಕೆ ಬರುತ್ತಾರೆ. ಇದರಿಂದ ಸುಮಾರು ೧೩೮ ಪುರುಷ ಸಂಸದರು ಅಧಿಕಾರ ತೊರೆಯಬೇಕಾಗುತ್ತದೆ. ವಿಧೇಯಕವನ್ನು ವಿರೋಧಿಸಲು ಪುರುಷರು ನೀಡುವ ಕಾರಣಗಳಿವು. ವಿಧೇಯಕಕ್ಕೆ ಒಪ್ಪಿಗೆ ದೊರೆತರೆ ಮಹಿಳೆಯರು ಬಿ.ಜೆ.ಪಿ. ಪರವಾಗುತ್ತಾರೆ. ಅಂಗೀಕೃತವಾಗದಿದ್ದರೆ ಹಿಂದುಳಿದವರು ಮಸೂದೆಯನ್ನು ವಿರೋಧಿಸಿದಂತಾಗುತ್ತದೆ. ೩೩ ಶೇಕಡ ಮೀಸಲಾತಿ ಮಹಿಳೆಯರಿಗೆ ದೊರೆತರೆ, ಮಹಿಳೆಯರು ಅಧಿಕಾರದ ಮುಖ್ಯವಾಹಿನಿಗೆ ಬರುತ್ತಾರೆ, ರಾಜಕೀಯ ಪಕ್ಷಗಳು ಮಹಿಳೆಯರಿಗೆ ಆದ್ಯತೆ ಕೊಡಬೇಕಾಗುತ್ತದೆ.

೧೯೯೭ ಆಗಸ್ಟ್‌ನಲ್ಲಿ ಸಂಯುಕ್ತ ರಂಗ ಲೋಕಸಭೆಯಲ್ಲಿ ಮಹಿಳಾ ಮೀಸಲಾತಿ ವಿಧೇಯಕ ಮಂಡಿಸಿದಾಗ ಶರದ್‌ಯಾದವ್ ವಾಗ್ವಾಳಿ ಮಾಡಿ ಮಸೂದ ಮಂಡನೆಯಾಗದಂತೆ ತಡೆದಿದ್ದರು. ಅವರ

ಅಭಿಪ್ರಾಯದಲ್ಲಿ ಮಹಿಳೆಯರೆಂದರೆ ಕೂದಲು ಮುಚ್ಚಿಕೊಳ್ಳುವಂತೆ ಸೆರಗನ್ನು ತಲೆಯ ಮೇಲೆ ಹಾಕಿಕೊಂಡು, ಪುರುಷರಿಗೆ ಭಯಪಡುವ ಅವಿದ್ಯಾವಂತ ಸ್ತ್ರೀ.[೬] ನಂತರದಲ್ಲಿ ಅಧಿಕಾರಕ್ಕೆ ಬಂದ ಬಿ.ಜೆ.ಪಿ ನೇತೃತ್ವದ ಮಿತ್ರಪಕ್ಷಗಳ ಸರ್ಕಾರ ೧೯೯೮ ರಲ್ಲಿ ಸಂವಿಧಾನದ ೮೪ ನೆಯ ತಿದ್ದುಪಡಿ ಮಸೂದೆಯಾಗಿ ಮೀಸಲಾತಿ ವಿಧೇಯಕವನ್ನು ಮಂಡಿಸಲು ಪ್ರಯತ್ನಿಸುತ್ತಿದ್ದಾಗ ಲಾಲುಪ್ರಸಾದ್‌ಯಾದವ್ ಹಾಗೂ ಮುಲಾಯಂಸಿಂಗ್ ಯಾದವ್ ಮಸೂದೆ ವಿರೋಧಿಸಿದ್ದರು. ಶೇಕಡ ೩೩.೩೩ ಮೀಸಲಾತಿಯನ್ನು ಏಕರೂಪಿಯಾಗಿ ನೀಡಿದಲ್ಲಿ, ಅಂಚಿನಲ್ಲಿರುವ ದುರ್ಬಲ ಮಹಿಳೆಯರು ಕೇಂದ್ರದೆಡೆಗೆ ಬರುವುದು ಹೇಗೆ? ಇದರಿಂದ ದುರ್ಬಲ ಮಹಿಳೆಯರು ಅಧಿಕಾರದಿಂದ ವಂಚಿತರಾಗುತ್ತಾರೆ, ಅವರ ಬದಲಿಗೆ ತುಂಡು ಕೂದಲಿನ, ತುಟಿ ಲೇಪನದ, ಬಾಟಲಿ ನೀರು ಕುಡಿಯುವ, ತಂಪು ಕನ್ನಡಕದ ಇಂಗ್ಲೀಷ್ ಮಾತನಾಡುವ ಮಹಿಳೆಯರು ಇದರ ಲಾಭ ಪಡೆಯುತ್ತಾರೆ. ಅದಕ್ಕೆ ಒಳಮೀಸಲಾತಿ ಬೇಕೆಂದರು. ತುಂಡು ಕೂದಲಿನ ಮಹಿಳೆ ಅಂದರೆ ಆಧುನಿಕ, ವಿದ್ಯಾವಂತ, ಸ್ವತಂತ್ರ ಮನೋಭಾವದ ಮಹಿಳೆ ಎಂದರ್ಥ. ಸದನದಲ್ಲಿ ಈ ವಿಷಯವಾಗಿ ಗದ್ದಲ ನಡೆಯುತ್ತಿದ್ದಾಗ ಸಭಾಧ್ಯಕ್ಷರು ಮಸೂದೆ ಮಂಡನೆಯನ್ನೇ ಮುಂದಕ್ಕೆ ಹಾಕಿದರು. ಒಬ್ಬ ಮಹಿಳಾ ಸಭಾಧ್ಯಕ್ಷೆ ಇದ್ದಿದ್ದರೆ ಈ ಮಸೂದೆ ಮಂಡನೆಯಾಗುತ್ತಿತ್ತು. ಈ ವಿಷಯ ವಿವಾದಿತ ಚರ್ಚೆಯಾಯಿತು.

ಸಂವಿಧಾನದ ೩೩೦ ಮತ್ತು ೩೩೨ ನೇ ವಿಧಿಯನ್ವಯ ಪರಿಶಿಷ್ಟರಿಗೆ ನೀಡುವ ರಾಜಕೀಯ ಮೀಸಲು ಕಡ್ಡಾಯವಾಗಿ ಕೊಡಬೇಕು. ಇಲ್ಲಿ ಪರಿಶಿಷ್ಟ ವರ್ಗ ಹಾಗೂ ಪಂಗಡದ ಜನರನ್ನು ಯಾವುದೇ ರೀತಿಯಲ್ಲಿ ಪ್ರತ್ಯೇಕಿಸಲಾಗದು, ಹಾಗಾಗಿ 'ಕೆನೆಪದರ' ಗುರುತಿಸುವಂತಿಲ್ಲವೆಂದು ನಿವೃತ್ತ ನ್ಯಾಯಾಧೀಶ ಎಂ.ರಾಮಾಜೋಯಿಸ ಹೇಳಿಕೆ ಕೊಟ್ಟರು.[೭] ಹಲವಾರು ಪುರುಷ ರಾಜಕಾರಣಿಗಳು ಮೀಸಲಾತಿ ಮಸೂದೆಯನ್ನು ತಡೆಹಿಡಿಯಲು ಹುನ್ನಾರ ನಡೆಸಹತ್ತಿದರು. ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ನಾಗರಿಕರಲ್ಲಿ ಅನುಕಂಪದ ಅಲೆ ಎಬ್ಬಿಸಲು ತಂತ್ರ ಹೂಡಿದರು.

ಮೀಸಲಾತಿಯ ಕಲ್ಪನೆಯ ಬಗ್ಗೆ ನೆಹರು ಹಾಗೂ ರಾಜೀವಗಾಂಧಿಯವರು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದ್ದರು (ಮತ ಬ್ಯಾಂಕೇ 'ಮೀಸಲು' ಪ್ರೇಮದ ಆಧಾರ. ೨೬ ನವೆಂಬರ್ ೨೦೦೬. ಪುಟ. ೧) ಜಾತಿ ಮತದ ಆಧಾರದ ಮೇಲೆ ದೇಶದ ಏಕತೆಯನ್ನು ಒಡೆಯುವ, ಸಮುದಾಯಗಳನ್ನು ಎತ್ತಿ ಕಟ್ಟುವ ನೀತಿಯನ್ನು ಕೈಬಿಡಬೇಕೆಂದು ನೆಹರುರವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು.[೮] ೧೯೯೦ ರಲ್ಲಿ ರಾಜೀವಗಾಂಧಿಯವರು ಮೀಸಲಾತಿಯ ಬಗ್ಗೆ ಮಾತನಾಡುತ್ತಾ, ಭಾರತದಲ್ಲಿ ಜಾತಿರಹಿತ ಸಮಾಜ ಸ್ಥಾಪನೆಯಾಗಬೇಕಾದರೆ ನಮ್ಮ ನೀತಿ ನಿರ್ಧಾರಗಳು ಆ ದಿಕ್ಕಿನತ್ತಲೇ ಇರಬೇಕೆಂದರು. ಹಿಂದುಳಿದ ವರ್ಗಗಳಿಗೆ ಲಭ್ಯವಿರುವ ಮೀಸಲು ಅನುಕೂಲವನ್ನು ಕೆಲವೇ ಜಾತಿಗಳವರು ಪಡೆಯುತ್ತಿದ್ದಾರೆ.

ಮೀಸಲು ಸೌಲಭ್ಯ ಹಿಂದುಳಿದ ವರ್ಗದ ಎಲ್ಲಾ ಉಪಜಾತಿಗಳಿಗೆ ಸಮನಾಗಿ ದೊರಕುತ್ತಿಲ್ಲ. ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗುತ್ತಿರುವ ಹಿಂದುಳಿದವರ್ಗಗಳ ಉಪಜಾತಿಗಳಿಗೆ ಒಳಮೀಸಲು ಕಲ್ಪಿಸುವುದಕ್ಕಾಗಿ ಹೋರಾಟವನ್ನು ಮಾಡುವುದಾಗಿ ದೇವಗೌಡರವರು ಹೇಳಿದ್ದರು. ಆದಿ ಜಾಂಬವ, ಆದಿ ದ್ರಾವಿಡ, ಗಂಗಾಮತಸ್ಥ, ಪರಿಶಿಷ್ಟ ಜಾತಿಯಲ್ಲಿನ ಚಿಕ್ಕ-ಪುಟ್ಟ ಜನಾಂಗಗಳು ಪ್ರಾತಿನಿಧ್ಯ ವಂಚಿತವಾಗಿವೆ. ಅಂತಹವರಿಗೆ ಒಳ ಮೀಸಲು ಅವಕಾಶ ಕಲ್ಪಿಸಿ, ಸಾಮಾಜಿಕ ವ್ಯವಸ್ಥೆಗೆ ನ್ಯಾಯ ದೊರಕಿಸುವಂತೆ ಸರ್ಕಾರವನ್ನು ಒತ್ತಾಯಿಸಬೇಕೆಂದು ನಾಗರಿಕರಲ್ಲಿ ದೇವೇಗೌಡರು ಮನವಿ ಮಾಡಿದರು.

ನಂತರದಲ್ಲಿ ಅಧಿಕಾರಕ್ಕೆ ಬಂದ ಯು.ಪಿ.ಎ. ಸರ್ಕಾರ ಮುಸ್ಲಿಂರ ಗಣತಿಗೆ, ಸಾರ್ವಜನಿಕ ಬದುಕಿನಲ್ಲಿ ಅವರ ಸ್ಥಿತಿಗತಿಯ ತುಲನೆಗೆ ನ್ಯಾಯಮೂರ್ತಿ ಸಾಚಾರ ಸಮಿತಿ ರಚಿಸಿತು. ಈ ಸಮಿತಿ ತನ್ನ ವರದಿಯನ್ನು ನೀಡುತ್ತಾ, ದೇಶದಲ್ಲಿ ಮುಸ್ಲಿಂರ ಜೀವನಮಟ್ಟ ತೀರಾ ಹದಗೆಟ್ಟಿದ್ದು, ಅವರನ್ನು ಮೇಲ್‌ಸ್ತರಕ್ಕೆ ತರಲು ಎಲ್ಲ ಅಗತ್ಯ ಕ್ರಮ ಕೈಗೊಳ್ಳಬೇಕೆಂದು ವರದಿ ತಿಳಿಸಿತು. ಈಗಾಗಲೇ ಅಲ್ಪ ಸಂಖ್ಯೆಯಲ್ಲಿರುವ ಕ್ರಿಶ್ಚಿಯನ್ನರೂ ಸಹ ಮೀಸಲು ಬೇಕು ಎಂದು ಸರ್ಕಾರವನ್ನು ಒತ್ತಾಯಿಸುತ್ತಿರುವರು. ಮೀಸಲಾತಿಯ ಪರ-ವಿರೋಧಗಳನ್ನು ಬದಿಗಿಟ್ಟು ನೋಡಿದಾಗ, ರಾಜಕೀಯ ಪಕ್ಷಗಳ ಲೆಕ್ಕಾಚಾರಗಳೇ ಪ್ರಧಾನವಾಗಿ ಕಂಡುಬರುತ್ತದೆ. ಜಾತಿ ಆಧಾರಿತ ಮೀಸಲಾತಿಯ ಒತ್ತಾಯದ ಹಿಂದಿನ ಉದ್ದೇಶ ರಾಜಕೀಯ ಪಕ್ಷಗಳು ಮತವನ್ನು ಪಡೆಯುವುದಾಗಿದೆ.

ಮೀಸಲಾತಿಯಲ್ಲಿ ಒಳಮೀಸಲಾತಿ ಮಾಡಿದಾಗ ಎಲ್ಲ ತಳ ಸಮುದಾಯದ ಪಂಗಡಗಳಿಗೂ ಮೀಸಲಾತಿ ಸಿಕ್ಕಾಗ ಆ ವರ್ಗದ ಮಹಿಳೆಯರೂ ರಾಜಕೀಯ ಅಧಿಕಾರದ ಸ್ಥಾನ ಪಡೆಯುತ್ತಾರೆ. ಹೀಗೆ ಮಹಿಳೆಯರಿಗೆ ಶೇಕಡ ೩೩.೩೩ ಸ್ಥಾನಗಳನ್ನು ಹಂಚಿದರೆ, ಉಳಿಯುವುದು ಶೇಕಡ ೬೭ ಸೀಟುಗಳು. ಅವುಗಳಲ್ಲಿ ಮಹಿಳೆಯರು ಪುರುಷರಿಗೆ ಸಮನಾದ ಹಕ್ಕನ್ನು ಪಡೆದುಕೊಂಡರೆ. ಪುರುಷ ರಾಜಕಾರಣಿಗಳು ಅಧಿಕಾರ, ಸ್ಥಾನ ಕಳೆದುಕೊಳ್ಳುತ್ತಾರೆ.

ಮಹಿಳಾ ಮೀಸಲಾತಿಯಲ್ಲಿ ಪಾಲ್ಗೊಳ್ಳುವ ಮಹಿಳೆಯರಿಗೆ ರಾಜಕೀಯ ಹಿನ್ನೆಲೆಯಿಲ್ಲ, ಜ್ಞಾನವಿಲ್ಲ, ಅವರು ರಾಜಕೀಯ ತರಬೇತಿ ಪಡೆದಿಲ್ಲ, ಸಮರ್ಥರಲ್ಲ, ಅವರಿಗೆ ಯೋಜನೆ ರೂಪಿಸುವ ಬಗ್ಗೆ, ರಾಷ್ಟ್ರ ಆದಾಯ-ಖರ್ಚಿನ ಅಂದಾಜು ಪಟ್ಟಿಯನ್ನು ಸಿದ್ಧಪಡಿಸುವ ಬಗ್ಗೆ ಗೊತ್ತಿಲ್ಲ. ಮೀಸಲಾತಿ ಮಸೂದೆಯಿಂದ ಅನುಕೂಲಕ್ಕಿಂತ ಅನಾನುಕೂಲತೆ ಹೆಚ್ಚು ಎಂದು ಪುರುಷ ರಾಜಕಾರಣಿಗಳು ಹೇಳಿಕೆ ನೀಡತೊಡಗಿದರು. ಮಹಿಳೆಯರಿಗೆ ರಾಜಕಾರಣ ಒಗ್ಗುವುದಿಲ್ಲ, ಎಂಬ ನಕಾರಾತ್ಮಕ ಧೋರಣೆಗಳನ್ನು ತಾಳುತ್ತಲೇ ಮಹಿಳೆಯನ್ನು ರಾಜಕಾರಣದಿಂದ ದೂರವಿಡುವ ಪ್ರಯತ್ನ ನಿರಂತರವಾಗಿ ನಡೆದಿದೆ. ತಳಮಟ್ಟದ

ರಾಜಕೀಯದಿಂದ ಹಿಡಿದು ಮೇಲ್ಮಟ್ಟದ ರಾಜಕೀಯದವರೆಗೆ ಪುರುಷನಿಗಿಲ್ಲದ ರಾಜಕೀಯ ತರಬೇತಿ, ವಿದ್ಯಾರ್ಹತೆ ಮಾನದಂಡ, ಸಾಮರ್ಥ್ಯತೆ ಮಹಿಳೆಯರಿಗೇಕೆ? ಹಲವಾರು ರಾಜಕಾರಣಿಗಳು ಲಂಚ ಪ್ರಕರಣ ಇಲ್ಲವೆ ಕೊಲೆ, ಸುಲಿಗೆ, ಪ್ರಕರಣಗಳಲ್ಲಿ ಅಪರಾಧಿಗಳೆಂದು ಜೈಲು ಶಿಕ್ಷೆ ಅನುಭವಿಸಿದ್ದರೂ, ಫೂಲನ್‌ದೇವಿಯನ್ನು ಉದಾಹರಿಸುತ್ತ ಸಮಾಜದ ಕೇಂದ್ರದಲ್ಲಿ ತಮ್ಮ ಸ್ಥಾನವನ್ನು ಗಟ್ಟಿಯಾಗಿಸುವಲ್ಲಿ ಮುನ್ನಡೆದಿದ್ದಾರೆ. ಸರೋಜಿನಿ ನಾಯ್ಡು, ಕಮಲಾದೇವಿ ಚಟ್ಟೋಪಾಧ್ಯಾಯರವರು ಸ್ವಾತಂತ್ರ್ಯ ಹೋರಾಟದಲ್ಲಿ ಹೋರಾಡಿದಾಗ ಆ ಧೀರ ಮಹಿಳೆಯರ ಕಾರ್ಯದಕ್ಷತೆ, ಮನಪೂರ್ವಕ ತೊಡಗುವಿಕೆ, ಸಾಧನೆಗಳನ್ನು ಗುರುತಿಸಿ, ಪ್ರಶಂಸಿದ್ದವರು ನಂತರದಲ್ಲಿ ಅವರ ದಕ್ಷತೆ ಬಗ್ಗೆ ಪ್ರಶ್ನಿಸಲಾರಂಭಿಸಿದ್ದು, ಪುರುಷ ಪ್ರಧಾನ ಸಮಾಜದ ದ್ವಿಮುಖವನ್ನು ಬಿಂಬಿಸುತ್ತದೆ.

ಮಹಿಳೆಯರ ನೈಜ ಹೋರಾಟವನ್ನು, ದಕ್ಷತೆಯನ್ನು, ಚಿಂತನಾಶೀಲ ವಿಚಾರಗಳನ್ನು ಸಾಂಸ್ಕೃತಿಕ ಕೊಂಡಿಗಳಿಂದ ಹೊರಬರಲಾರದ ಸ್ಥಿತಿಯಲ್ಲಿರಿಸುತ್ತಲೇ ಅಪ್ರಮುಖವಾಗಿ ಚಿತ್ರಿಸಲಾಗುತ್ತದೆ. ಭಾರತದಲ್ಲಿ ಸುಮಾರು ೧೩ ವರ್ಷಗಳ ಕಾಲ ಧೀರ್ಘವಾಗಿ ದಕ್ಷತೆಯಿಂದ ಪ್ರಧಾನಮಂತ್ರಿಯಾಗಿ ನಾಡಿಗಾಗಿ ಕೆಲಸ ಮಾಡಿದ ಶ್ರೀಮತಿ.ಇಂದಿರಾಗಾಂಧಿಯವರ ಕಾರ್ಯದಕ್ಷತೆಯನ್ನು ಪ್ರಜ್ಞಾಪೂರ್ವಕವಾಗಿ ನಿರ್ಲಕ್ಷಿಸಲಾಗುತ್ತಿದೆ. ಮಹಿಳೆಯಾಗಿ ಮೂರು ಬಾರಿ ಜನಪ್ರತಿನಿಧಿಯಾಗಿ ಚುನಾವಣೆಯಲ್ಲಿ ಆಯ್ಕೆಯಾಗಿದ್ದು, ಕೇವಲ ಅವರ ಪರಿಶ್ರಮ, ದಕ್ಷತೆಯಿಂದ. ರಾಜಕೀಯ ಪ್ರವೇಶ ಯಾವ ಮೂಲದಿಂದಾಗಿದ್ದರೂ, ಅವರು ಜನಪ್ರತಿನಿಧಿಯಾಗಿ ಜನರಿಗಾಗಿ ಒಳ್ಳೆಯ ಕಾರ್ಯ ಮಾಡುವ ನಾಯಕತ್ವದ ಗುಣಗಳನ್ನು ಹೊಂದಿದ್ದರು. ಈ ಹಿನ್ನೆಲೆ ಅವರನ್ನು ಮೂರು ಬಾರಿ ರಾಷ್ಟ್ರ ನಾಯಕಿಯನ್ನಾಗಿಸಿತು. ಉತ್ತರ ಭಾರತದ ಬಿಹಾರ, ಉತ್ತರಪ್ರದೇಶಗಳಲ್ಲಿ ಚುನಾವಣೆ ಸಮಯದಲ್ಲಿ ನಡೆವ ದಂಗೆ, ಗೂಂಡಾಗಿರಿ, ಭೂಗತ ವ್ಯಕ್ತಿಗಳೊಂದಿಗಿನ ಚಟುವಟಿಕೆಗಳು, ಹಿಂಸೆಗಳು ಮಹಿಳೆ ರಾಜಕಾರಣವನ್ನು ದೂರುವಷ್ಟು ಕೆಟ್ಟದ್ದಾಗಿವೆ. ರಾಷ್ಟ್ರ-ರಾಜ್ಯ ಮಟ್ಟದಲ್ಲಿ ಮಹಿಳೆ ಶಾಸಕಾಂಗದ ಭಾಗವಾಗಿ ಗುರುತಿಸಲ್ಪಡಬೇಕು.

ಪುರುಷ ನಿರ್ಮಿತ ಸಾಮಾಜಿಕ ವ್ಯವಸ್ಥೆ ಮಹಿಳೆಯರನ್ನು ಕನಿಷ್ಠವಾಗಿರಿಸುವ ಹುನ್ನಾರ ನಡೆಸುತ್ತಿದ್ದಾರೆ. ರಾಷ್ಟ್ರದ ತಳಮಟ್ಟದ ಅಧಿಕಾರ ಕೇಂದ್ರದಲ್ಲಿ ಮಹಿಳೆಯರಿಗೆ ೩೩.೩೩ ಪ್ರತಿಶತ ಸ್ಥಾನಗಳನ್ನು ಕೊಟ್ಟಾಗಲೂ ವಿಧಾನಸಭೆ, ಲೋಕಸಭೆಯಲ್ಲಿ ಯಾಕೆ ಮಹಿಳಾ ಮೀಸಲಾತಿ ನೀಡಬೇಕೆಂದು ಕೇಳುವ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಕೆಳಮಟ್ಟಕ್ಕೆ ತಳ್ಳುವ ಪ್ರಯತ್ನ ಮಾಡುತ್ತಿದೆ. ಕೇವಲ ರಾಷ್ಟ್ರದ ತಳಮಟ್ಟದಲ್ಲಿ ಮಹಿಳೆಗೆ ಶೇಕಡ ೩೩.೩೩ ಸ್ಥಾನಗಳನ್ನು ನೀಡಿದರಾಯ್ತೆ? ಎಲ್ಲಿ ಅಧಿಕಾರ ಕಡಿಮೆಯಿರುತ್ತದೆಯೋ ಅಲ್ಲಿ

ಮಹಿಳೆಯರ ಭಾಗವಹಿಸುವಿಕೆ, ಪ್ರತಿನಿಧಿಸುವಿಕೆಯನ್ನು ಒಪ್ಪುವ ಸಮಾಜ. ಕೇಂದ್ರದೆಡೆಗೆ ಹೋದಂತೆ ಅಧಿಕಾರ ವ್ಯವಸ್ಥೆಯಲ್ಲಿ ಮಹಿಳೆ ಭಾಗವಹಿಸಿದರೆ, ಇದೂವರೆಗೂ ರೂಪಿತವಾದ ಪಿತೃ ಪ್ರಧಾನ ವ್ಯವಸ್ಥೆಯ ರಚನೆಯಲ್ಲಿ ಬದಲಾವಣೆ ಆಗಬಹುದು. ಇದರಿಂದ ಮಹಿಳೆಯರಿಗೆ ಹೆಚ್ಚಿನ ಆದ್ಯತೆ ದೊರಕುವುದೆಂದು ಪುರುಷ ಪ್ರಧಾನ ರಾಜಕೀಯ ವ್ಯವಸ್ಥೆಯು ಪರಿಭಾವಿಸಿದೆ.

ಮಹಿಳೆಯರು ಇಂದು ಕೇಳುತ್ತಿರುವುದು ಭಿಕ್ಷೆಯನ್ನಲ್ಲ. 'ಪ್ರಾತಿನಿಧ್ಯವಾದ್ದರಿಂದ, ಮಹಿಳಾ ಮೀಸಲಾತಿ ಎನ್ನುವುದಕ್ಕಿಂತ' ಮಹಿಳಾ ಪ್ರಾತಿನಿಧ್ಯಕ್ಕಾಗಿ ಹೋರಾಟ ಎನ್ನುವುದು ಸೂಕ್ತ. (ಗಾಯಿತ್ರಿ.ಎನ್. ಸಂಪಾದಕೀಯ ಅಚಲ, ಕ.ವಿ.ವಿ. ಪುಟ. ೩) ದೇಶಕ್ಕೆ ಸ್ವಾತಂತ್ರ್ಯ ಬಂದು ೬೦ ವರ್ಷಗಳಾಗುತ್ತಿದ್ದರೂ ರಾಜಕೀಯವಾಗಿ ಮಹಿಳೆಗೆ ಪ್ರಾತಿನಿಧ್ಯ ಸಿಕ್ಕಿಲ್ಲ. ಅವಳ ಜೀವನದಲ್ಲಿ ಉನ್ನತ ಬದಲಾವಣೆಗಳಾಗಿಲ್ಲ.

ನಾಗರಿಕರೆಲ್ಲರ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯ ಸುಧಾರಣೆ ರಾಷ್ಟ್ರದ ಪ್ರಗತಿಯೆಂದಾದರೆ ಮಹಿಳೆ ರಾಷ್ಟ್ರದ ನಾಗರಿಕಳಲ್ಲವೇ? ಅವಳ ಜೀವನಶೈಲಿ, ಜೀವನಮಟ್ಟದಲ್ಲಿ ಅಭಿವೃದ್ಧಿಯಾದಾಗ ಮಹಿಳಾ ಅಭಿವೃದ್ಧಿಯೆನ್ನುವದಾದರೆ, ಇದೂವರೆಗೂ ಮಹಿಳೆಯರ ಕಾರ್ಯಕ್ಷೇತ್ರ ವ್ಯಾಪ್ತಿ ಹೆಚ್ಚಿಲ್ಲವೆಂದಾಯ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಸ್ತ್ರೀ-ಪುರುಷರು ಕಿತ್ತುಕೊಂಡ ತಮ್ಮ ಹಕ್ಕುಗಳನ್ನು ಪಡೆಯಲು ಹೋರಾಟ ನಡೆಸಿದರು. ಸ್ವಾತಂತ್ರಾ್ಯ ನಂತರದಲ್ಲಿ ಪುರುಷ ವರ್ಗ ಸ್ವಾತಂತ್ರ್ಯ ಹಕ್ಕು, ಅವಕಾಶಗಳನ್ನು ಪಡೆದರೂ ಮಹಿಳೆ ಹಕ್ಕು-ಸ್ವಾತಂತ್ರ್ಯ ಹಾಗೂ ಸಮಾನತೆ ಪಡೆಯಲು ಹೋರಾಡುತ್ತಿರುವಳು. ಮಹಿಳೆಯರಿಗೆ ಅರ್ಹತೆಯಿಲ್ಲ, ಅಕ್ಷರ ಜ್ಞಾನವಿಲ್ಲ, ಅನನುಭವಿ ಎಂಬ ವಾದಗಳಲ್ಲಿ ಹುರುಳಿಲ್ಲ.

ಮತದಾರನಿಗೆ 'ಮೀಸಲಾತಿ ಕ್ಷೇತ್ರದಲ್ಲಿ' ಸ್ವಾತಂತ್ರ್ಯವಿಲ್ಲವೆಂಬ ವಾದ ಅರ್ಥಹೀನವಾದದ್ದು. ಈವರೆಗಿದ್ದ ಪುರುಷ ಚುನಾವಣೆಗಳಲ್ಲಿ ಮತದಾರನಿಗೆಷ್ಟು ಆಯ್ಕೆಯಿತ್ತು?. ಹಣ, ಹೆಂಡ, ಬಟ್ಟೆ, ಮನೆಯ ಆಮಿಷ ನೀಡಿ ಮತದಾರರನ್ನು ಕೊಂಡುಕೊಳ್ಳುವ ಪುರುಷ ಕೇಂದ್ರಿತ ರಾಜಕೀಯ ವ್ಯವಸ್ಥೆ ಬದಲಾಗಬೇಕು. ಮಹಿಳೆಯರ ಚುನಾವಣಾ ಭಾಗವಹಿಸುವಿಕೆ, ಪ್ರತಿನಿಧೀಕರಣ ಪುರುಷರ ಒಪ್ಪಿಗೆ ಅನ್ವಯ ನಡೆಯುತ್ತದೆ. ಮಹಿಳೆ ಗೆಲ್ಲಲಾರದ ಕ್ಷೇತ್ರಗಳಲ್ಲೆಲ್ಲಾ ರಾಜಕೀಯ ಪಕ್ಷಗಳು ಮಹಿಳೆಗೆ ಟಿಕೇಟ್ ನೀಡುತ್ತಾರೆ. ಮಹಿಳೆಯನ್ನು ಚುನಾವಣಾ ಪ್ರಚಾರಕ್ಕಾಗಿ ಬಳೆಸಿಕೊಳ್ಳಲಾಗುತ್ತದೆ. ಮೀಸಲಾತಿಯನ್ನು ಒಪ್ಪುವವರಲ್ಲಿ ೩೩.೩೩% ಸ್ಥಾನಗಳಲ್ಲಿ ಮರುಹಂಚಿಕೆ ಪದ್ಧತಿ ವಿವಾದಾತ್ಮಕವಾಗಿದೆ. ಮೀಸಲಾತಿಯಲ್ಲಿ ಒಳಮೀಸಲಾತಿಯನ್ನು ಕೆಲವರು ವಿರೋಧಿಸಿದರೆ. ಕೆಲವರು ಒಪ್ಪುವರು. ಭಾರತದಲ್ಲಿನ ಲಿಂಗ

ಸಂಬಂಧವೂ ಜಾತಿ ರೂಪದಿಂದಲೇ ನಿರೂಪಿಸಲ್ಪಡುತ್ತದೆ. ಒಂದೊಂದು ಜಾತಿಯ ಮಹಿಳೆಗೆ ಒಂದೊಂದು ಬಗೆಯ ಹಿಂಸೆಯನ್ನು 'ನೀತಿ' ಯ ಹೆಸರಿನಲ್ಲಿ ಜಾತಿ ಆಧಾರಿತ ಪಿತೃ ಪ್ರಧಾನ ವ್ಯವಸ್ಥೆ ರೂಪಿಸಿದೆ. ಭಾರತೀಯ ಮಹಿಳೆಯರೆಲ್ಲಾ ಶೋಷಿತರೇ ಆದರೂ ಎಲ್ಲರ ಅಪಮಾನಗಳು ಒಂದೇ ಆಗಿಲ್ಲ. ಮೇಲ್ಜಾತಿಯ ಸ್ತ್ರೀ ಕುಟುಂಬದ ಚೌಕಟ್ಟಿನಲ್ಲಿ ಹಾಗೂ ಜಾತಿ ಒಳಾವರಣದಲ್ಲಿ ಶೋಷಿತರಾಗುತ್ತಾರಷ್ಟೆ, ಆದರೆ ದಲಿತ ಮಹಿಳೆಯ ಶೋಷಣೆಗೆ ಇಡೀ ಪುರುಷ ಸಮಾಜವೇ ಪೈಪೋಟಿ ನಡೆಸುತ್ತದೆ. ಸವರ್ಣೀಯ ಮಹಿಳೆಯರು ಸ್ವಲ್ಪ ಉತ್ತಮ ಸ್ಥಾನಮಾನಗಳನ್ನು ಪಡೆದುಕೊಂಡರೆ, ದಲಿತರು ಕನಿಷ್ಠವಾಗಿರುವರು. ಮಹಿಳೆಯರಿಗೆ ಮೀಸಲಾತಿ ಸಿಗಲೇಬೇಕು ಎನ್ನುವ ಪುರುಷರೂ ಇದ್ದಾರೆ, ಬೇಡ ಎನ್ನುವ ಮಹಿಳೆಯರೂ ಇದ್ದಾರೆ. ಇತ್ತೀಚೆಗೆ ಆಂಧ್ರಪ್ರದೇಶದಲ್ಲಿ ನಡೆದ ಮಹಿಳಾ ಎಂ.ಎಲ್.ಎ. ಹಾಗೂ ಎಂ.ಪಿ.ಗಳ ಸಮಾವೇಶದಲ್ಲಿ ಮಹಿಳೆಯರ ರಾಜಕೀಯ ಸಮಸ್ಯೆಗಳನ್ನು ಚರ್ಚಿಸಲಾಯಿತು. ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿರುವ ಹಾಗೂ ಇರಬೇಕಾದ ಮಹಿಳಾ ಪ್ರತಿನಿಧಿಗಳ ಸಮಸ್ಯೆಗಳನ್ನು ಚರ್ಚಿಸಲಾಯಿತು. ರಾಷ್ಟ್ರ-ರಾಜ್ಯ ರಾಜಕಾರಣದಲ್ಲಿ ಸಿಕ್ಕ ಅವಕಾಶಗಳನ್ನು ಸಮರ್ಥವಾಗಿ ನಿಭಾಯಿಸಿದ ಮಹಿಳಾ ರಾಜಕಾರಣಿಗಳ ಕಾರ್ಯದಕ್ಷತೆಯನ್ನು ಪ್ರಶಂಸಿಸಲಾಯಿತು. ನಿರಂತರವಾಗಿ ೧೪ ವರ್ಷಗಳಿಂದ ಯಾವ ಪಕ್ಷಕ್ಕೂ ದೊರಕದ ನಿಚ್ಚಳ ಬಹುಮತ ಇದೀಗ 'ಮಾಯಾವತಿ' ಮುಖಂಡತ್ವದಲ್ಲಿ ಬಿ.ಎಸ್.ಪಿ. (ಬಹುಜನ ಸಮಾಜ ಪಾರ್ಟಿ) ಪಕ್ಷಕ್ಕೆ ದೊರಕಿದೆ. ಜಾತಿ, ಧರ್ಮ, ಲಿಂಗಭೇದಗಳ ಮೂಲಕ ನಾಗರಿಕರನ್ನು ಗುರುತಿಸುತ್ತಿದ್ದ ಪಕ್ಷಗಳ ಧೋರಣೆಯನ್ನು ಟೀಕಿಸಿ, ಎಲ್ಲ ಜಾತಿ-ಜನಾಂಗದವರಿಗೆ ಸಮಾನ ಪ್ರಾತಿನಿಧ್ಯ ಕೊಟ್ಟ ಮಾಯಾವತಿ, ಪುರುಷರಿಗಿಂತ ಮಹಿಳೆ ರಾಜಕೀಯ ಅಧಿಕಾರಕ್ಕೆ ಸಮರ್ಥಳೆಂದು ತೋರಿಸಿಕೊಟ್ಟಿರುವರು. ಜಗತ್ತಿನ ಎಲ್ಲಾ ರಾಷ್ಟ್ರಗಳಲ್ಲಿ ಮಹಿಳಾ ವಿರೋಧ ಚಟುವಟಿಕೆಗಳು ನಡೆಯುತ್ತಿವೆ. ಬೆರಳೆಣಿಕೆಯಷ್ಟು ಸಂಸದರು ಮಹಿಳಾಪರ ಹೋರಾಡುತ್ತಾರೆ. ಮಹಿಳೆಯರ ಸಮಸ್ಯೆಗಳಿಗೆ ಮಹಿಳೆ ದನಿಯಾದಾಗ ಮಾತ್ರ ಮಹಿಳೆ ಸಶಕ್ತೀಕರಣದ ದಾರಿಯಲ್ಲಿ ಸಾಗಬಹುದು. ಮಹಿಳಾ ಸಮಸ್ಯೆಗಳನ್ನು ಚರ್ಚಿಸುವಂತೆ, ಪರಿಹರಿಸುವಂತೆ ಪುರುಷರ ಮೇಲೆ ಒತ್ತಡ ತರುವ ಮೂಲಕ ಮಹಿಳೆಯರು ಲಾಭ ಮಾಡಬಹುದು.

ಉಲ್ಲೇಖಗಳು :-

೧) ಪಾರ್ವತಮ್ಮ.ಸಿ, ೨೦೦೧, 'ಮೀಸಲಾತಿ ಒಂದು ಗಗನ ಕುಸುಮ' ಪುಟ. ೬

೨) ಮೀನಾಕ್ಷಿ. ಡಿ, ೨೦೦೨ 'ಗ್ರಾಮ ಪಂಚಾಯಿತಿಯಲ್ಲಿ ಮಹಿಳೆ ಪಾತ್ರ' ಪಿ.ಎಚ್.ಡಿ. ಪ್ರಬಂಧ, ಪುಟ. ೧೭

೩) ಡಾ. ಎಂ. ಉಷಾ, ೨೦೦೪, 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' ಪುಟ. ೪೦

೪) ಮಧುರ, '೧೯೯೭, 'ಪಂಚಾಯತ್ ಆಡಳಿತ ಸಾಧಕ ಬಾದಕಗಳು. ಪುಟ. ೩೮.

೫) ಡಾ. ಉಮಾಪತಿ, ೨೦೦೨, 'ಮಹಿಳಾ ಮೀಸಲಾತಿ' ಪ್ರಜಾವಾಣಿ, ಪುಟ. ೨.

೬) ಡಾ. ಉಮಾಪತಿ, ೨೦೦೬ 'ಮಹಿಳಾ ಮೀಸಲಾತಿ – ಒಂದು ಟಿಪ್ಪಣಿ' ಮಹಿಳಾ ಅಧ್ಯಯನ ಪುಟ ೬೬.

೭) ಎಂ. ರಾಮಾಜೋಯಿಸ. ೨೦೦೭, ವಿಜಯ ಕರ್ನಾಟಕ, 'ಕೆನೆಪದರ ಹೋರಾಟ' ಪುಟ. ೧

# ಉನ್ನತಮಟ್ಟದಲ್ಲಿ ನಿರ್ಧಾರ ಕೈಗೊಳ್ಳುವ ಸಮಿತಿಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ

| ಕ್ರ.ಸಂ | ಪಕ್ಷ | ಸಮಿತಿಗಳು | ಒಟ್ಟು ಸಂಖ್ಯೆ | ಮಹಿಳೆಯರ ಸಂಖ್ಯೆ | ಶೇಕಡವಾರು ಮಹಿಳೆಯರು |
|---|---|---|---|---|---|
| ೧. | ಸಿ.ಪಿ.ಎಂ. | ೧. ಪಾಲಿಟ್ ಬ್ಯೂರೊ | ೧೫ | ೦೦ | ೦೦ |
| | | ೨. ಸೆಂಟ್ರಲ್ ಕಮಿಟಿ | ೭೦ | ೦೫ | ೦೭ |
| ೨. | ಸಿ.ಪಿ.ಐ. | ೧. ಸೆಕ್ರೆಟರಿಯಟ್ | ೦೯ | ೦೦ | ೦೦ |
| | | ೨. ನ್ಯಾಶನಲ್ ಎಕ್ಸಿಕ್ಯೂಟಿವ್ | ೩೧ | ೦೩ | ೧೦ |
| | | ೩. ನ್ಯಾಷನಲ್ ಕೌನ್ಸಿಲ್ | ೨೫ | ೬--೭ | ೦೫ |
| ೩. | ಜನತಾದಳ | ೧. ಪೊಲಿಟಿಕಲ್ ಅಫೇರ್ಸ್ ಕಮಿಟಿ | ೧೫ | ೦೦ | ೦೦ |
| | | ೨. ಪಾರ್ಲಿಮೆಂಟರಿ ಬೋರ್ಡ್ | ೧೫ | ೦೦ | ೦೦ |
| | | ೩. ನ್ಯಾಶನಲ್ ಎಕ್ಸಿಕ್ಯೂಟಿವ್ | ೭೫ | ೧೧ | ೧೫ |
| ೪. | ಬಿ.ಜೆ.ಪಿ | ೧. ಪಾರ್ಲಿಮೆಂಟರಿ ಬೋರ್ಡ್ | ೦೯ | ೦೧ | ೧೧ |
| | | ೨. ಎಲೆಕ್ಷನ್ ಕಮಿಟಿ | ೧೭ | ೦೨ | ೧೨ |
| ೫. | ಕಾಂಗ್ರೇಸ್ | ೧. ವರ್ಕಿಂಗ್ ಕಮಿಟಿ | ೧೯ | ೦೨ | ೧೧ |
| ೬. | ಸಂಯುಕ್ತ ರಂಗ | ೧. ಸ್ಟೀರಿಂಗ್ ಕಮಿಟಿ | ೧೫-೧೭ | ೦೦ | ೦೦ |

ಇಂದು ಮಹಿಳೆ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಪ್ರವೇಶಿಸಿ, ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವಳು. ರಾಜಕೀಯ ಕ್ಷೇತ್ರದಲ್ಲಿ ಪುರುಷನಿಗೆ ಸಮಾನವಾಗಿ ಅವಕಾಶ, ಅಧಿಕಾರದ ಹಕ್ಕು ಪಡೆಯುವದಕ್ಕೆ ಹೋರಾಡುತ್ತಿರುವ ಮಹಿಳೆ ಈ ಮೂಲಕ ರಾಜಕೀಯ ರಂಗಕ್ಕೆ ತನ್ನದೆ ಆದ ವಿಶಿಷ್ಟ ಕೊಡುಗೆಯನ್ನು ನೀಡಲು ಬಯಸುತ್ತಿರುವಳು. 'ಮಹಿಳಾ ಮೀಸಲಾತಿ' ಮುಖಾಂತರ ರಾಜಕೀಯ ಹಕ್ಕುಗಳನ್ನು ಗುರುತಿಸುವ ಮುಖಾಂತರ ಮಹಿಳೆ ಸಮಾಜದ ಮುಖ್ಯವಾಹಿನಿಗೆ ಬರುತ್ತಿರುವಳು. ಈ ಹಿನ್ನೆಲೆಯೊಂದಿಗೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ಹಾಗೂ ಯಲಬುರ್ಗಾ ತಾಲ್ಲೂಕಿನ ಗ್ರಾಮಪಂಚಾಯತಿಯಲ್ಲಿರುವ ಮೀಸಲಾತಿ ಕ್ಷೇತ್ರದಿಂದ ಆಯ್ಕೆಯಾದ ಮಹಿಳಾ ಪ್ರತಿನಿಧಿಗಳನ್ನು ನೇರವಾಗಿ ಸಂದರ್ಶಿಸಲಾಗಿದೆ.

## ಪ್ರಕರಣ : ೧

ಕುಷ್ಟಗಿ ತಾಲೂಕಿನಿಂದ ೨೦ ಕಿ.ಮೀ. ದೂರದಲ್ಲಿರುವ 'ಕಂದಕೂರ' ಗ್ರಾಮಪಂಚಾಯತಿಯನ್ನು ನಾನು ಮೊದಲು ಆಯ್ದುಕೊಂಡೆನು. ಕಂದಕೂರ ಗ್ರಾಮದ ಒಟ್ಟು ಜನಸಂಖ್ಯೆ ೮,೫೦೦ (ಎಂಟು ಸಾವಿರದ ಐದು ನೂರು) ಅದರಲ್ಲಿ ಪುರುಷರು ೬೭೭೮, ಮಹಿಳೆಯರು ೧೭೨೧, ಪರಿಶಿಷ್ಟ ಜಾತಿಯವರು ೬೪೪, ಗ್ರಾಮಪಂಚಾಯತಿಯ ಜನರ ಮುಖ್ಯ ಉದ್ಯೋಗ ಒಕ್ಕಲುತನವಾಗಿದೆ. ಒಂದು ಗ್ರಾಮಪಂಚಾಯ್ತಿ ವ್ಯಾಪ್ತಿಗೆ ೪-೫ ಗ್ರಾಮಗಳು ಸೇರುತ್ತವೆ. ಕಂದಕೂರ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಗುಮಗೇರಾ, ನಾಗರಾಳ ಹಾಗೂ ಕನಕೊಪ್ಪ ಗ್ರಾಮಗಳು ಸೇರಿವೆ. ಕಂದಕೂರ ಗ್ರಾಮಪಂಚಾಯತಿಯ ಒಟ್ಟು ಚುನಾಯಿತ ಸದಸ್ಯರ ಸಂಖ್ಯೆ ೨೮ ಆಗಿದ್ದು, ಅದರಲ್ಲಿ ೯ ಮಹಿಳೆಯರು, ೧೯ ಪುರುಷರಿರುವರು. ಕಂದಕೂರ ಗ್ರಾಮಪಂಚಾಯತಿಯ ಅಧ್ಯಕ್ಷೆಯಾಗಿರುವ ದೇವಮ್ಮನವರನ್ನು ಹುಡುಕಿಕೊಂಡು ಅವರ ಮನೆಗೆ ಹೋದೆವು. ನಾನು ಸರ್ಕಾರದಿಂದ ಬಂದವಳೆಂದು ತಿಳಿದು ನನ್ನೊಂದಿಗೆ ಮಾತನಾಡಲು ಹಿಂಜರಿದರು. ನಾನು ಕನ್ನಡ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವ ಬಗ್ಗೆ ಹೇಳಿ, ಅಧ್ಯಯನಕ್ಕಾಗಿ ಮಾಹಿತಿ ಬೇಕಿತ್ತು ಎಂದಾಗ ಉತ್ಸಾಹದಿಂದ ಒಪ್ಪಿಗೆ ನೀಡಿದರು. ದೇವಮ್ಮನವರು 'ಅಧ್ಯಕ್ಷೆ ಪದವಿಯ' ಮೂಲಕ ಮಾಡಿದ ಗ್ರಾಮ ಸುಧಾರಣೆ, ಸಾಧನೆಗಳ ಬಗ್ಗೆ ಹೇಳಿದರು. ಅದನ್ನು ಅವರ ಮಾತಲ್ಲಿ ಪ್ರಸ್ತುತ ಪಡಿಸುತ್ತಿರುವೆ.

'ನನ್ನ ಹೆಸ್ರು ದೇವಮ್ಮ ರಾಮಣ್ಣ ಗೋಪಾಳ', ನಾವು ತಳವಾರು, ಊರ ಜನ, ದೈವದೋರು ನಮ್ಮ ಮನಿಗೆ ಬಂದು, ಎಲೆಕ್ಷನ್ನ್ಯಾಗ ನಿಲ್ಲು ಅಂದ್ರು. ನಮ್ಮ ಅಣ್ಣ (ಮೈದುನನ್ನು ಅಣ್ಣ ಎಂದು ಕರೆಯುವರು) ತಾಲೂಕ ಪಂಚಾಯಿತಿ ಸದಸ್ಯನಾಗಿರುವ. ಹೀಗಾಗಿ ಜನಾ ಮನಿಗೆ ಬರೋರು ಹೋಗೋರು, ನನ್ಗೂ ಆಸೆ ಬಂತು, ಒಪ್ಪಿಕೊಂಡೆ. ನಾ ಒಲ್ಲೆ ಅಂದ್ರ ನನ್ಗ ಸುಮಾರ ಆಗತಿತ್ತು, ಯಾಕಂದ್ರ ನಮ್ಮೂರ ಮಂದಿ ಮತ್ತು ಸುತ್ತಮುತ್ತಲಿನ ಮಂದಿಗೆ ನಾ ಭಾಳ ಕೆಲ್ಸ ಮಾಡಿಸಿ ಕೊಟ್ಟಿನಿ. ಅವಾಗೆಲ್ಲ ಸದಸ್ಯರು ನೀನಿರೋದಕ್ಕ ಇಷ್ಟಾಯ್ತು, ಇಲ್ಲಂದ್ರ ನಮ್ಮನ್ನ ಯಾರ ಕೇಳತಿದ್ರು? ಅಂದಾಗ ಖುಷಿ ಆಗತೈತ್ರಿ. ಎಲೆಕ್ಷನ್ನ್ಯಾಗ ಸ್ವಲ್ಪ ದುಡ್ಡು ಖರ್ಚಾತು. ಗೊತ್ತಿದ್ದ ಮಂದಿಗೆ ಚಾ, ಕಾಫಿಗಂತ ದುಡ್ಡು ಖರ್ಚಾತು. ನಮ್ಮನಿಯವರೆಲ್ಲಾ ಓಡಾಡಿ 'ವೋಟ್' ಹಾಕೋಕೆ ಕೇಳಿದ್ರಿ. ಏನೋರ ಮನಿಗೂ ಹೋಗಿನಿ. ನನ್ಗ ಓದಾಕ ಬರಿಯಾಕ ಬರಲ್ಲ. ನನ್ನ ಸಹಿ ಬೇಕೇ ಬೇಕು ಅಂದ್ರು ಸರ್ಕಾರದೋರು. ಅದಕ್ಕೆ ಮನ್ಯಾಗ ಕೂತು ನನ್ನ ಸಹಿ ಮಾಡೋಕೆ ಕಲಿತೆ. ಆಗ ಧೈರ್ಯ ಬಂತು. ನಮ್ಮೂರ ಮಂದಿ ನನ್ನ ಗೆಲ್ಲಿಸಿದ್ರು. ನಾನವರಿಗೆ ಏನಾರ ಮಾಡಬೇಕು ಅನಿಸ್ತು. ಮಂದಿಗೆ ಲೈಟಿನ ಕನೆಕ್ಷನ್ ಕೊಟ್ಟಿನಿ, ಮನಿ ಮುಂದ ಬಂಡಿ ಹಾಕಿಸಿನಿ. ನೀರಿನ ತ್ರಾಸ ಕಡಿಮೆ ಮಾಡಿನಿ, ಬಡವರಿಗೆ ಆಶ್ರಯ ಮನಿ ಕೊಡಿಸಿನಿ. ರಸ್ತಿ ಸ್ವಚ್ಛ ಮಾಡಿಸಿನಿ. ಆದ್ರ ನಮ್ಮೂರ ಮಂದಿ ಕಸಾನ್ನ ಮನೆಮುಂದ ಎಸಿತಾರ. ಹೀಗಾಗಿ ಕಸಾ ಚರಂಡ್ಯಾಗ ಕೂತಬಿಡುತ್ತ, ಅದನ್ನ ಕ್ಲಿನ್ ಮಾಡಿಸ್ರಿ ಅಂತ ನಮ್ಗ ಹೇಳ್ತಾರ. ಸರ್ಕಾರದೊರು ಶೌಚಾಲಯ ಇಲ್ಲದೋರಿಗೆ ೫೦೦ ರೂ. ಕೊಡ್ತಾರ. ಓಣಿ ಬಡತನ ಮತ್ತು ಜಾತಿ ಆಧಾರದ ಮೇಲೆ ಕೊಡ್ತೀವಿ. ದುಡ್ಡು ಇಸ್ಕೊಂಡ ಶೌಚಾಲಯನ ಕಟ್ಟಿಸ್ಕೊಳ್ಳೊದಿಲ್ಲ. ಬಂಡಿ ಹಾಕಿಸದಿದ್ರ ಕುಡಿದ ಬಂದ ಗಂಡಸರು ಕೂಗಾಡ್ತಾರ. ನಾನೇನ ಹೆದರೋದಿಲ್ಲ ದಬಾಯಿಸ್ತಿನಿ. ನಮ್ಮ ಜಾತಿ ಗುಡಿಗೆ ದುಡ್ಡು ಬೇಕು ಅಂತ ತಗಾದೆ ತೆಗಿತಾರ. ಹೆಣ್ ಮಕ್ಕಳು ಮೆಂಬರಾದೋರು 'ಗಂಡಸರ ಮಾತೇನ ಕೇಳ್ತಿ. ಅಡವಿಗೆ ಹೋಗಿ ರಾತ್ರಿ ಬರ್ತಾರ, ೨೦ ರೂಪಾಯಿ ಕೊಟ್ರ ಕುಡಿತಾರ, ಅವರಿಗೇನ ಗೊತ್ತ ಊರ ಸಮಸ್ಯೆ ಅಂತಾರ. ಆದ್ರ ನಾ ಎಲ್ಲಾರ ಮಾತು ಕೇಳ್ತೀನಿ. ರೆಡ್ಡ್ಯಾರಿಗೆ, ಲಿಂಗಾಯತರಿಗೂ ನೀರಿನ ಸೌಕರ್ಯ ಮಾಡಿನಿ.

ತಿಂಗಳಿಗೊಮ್ಮೆ ಮೀಟಿಂಗ ಕರಿತಾರ, ಸೆಕ್ರೆಟರಿ ೧ ವಾರ ಮುಂಚೆ ನಮ್ಗೆಲ್ಲಾ 'ಇಂತಾ ದಿನ ಆಫೀಸಗ ಬರ್ರಿ' ಅಂತ ತಿಳಿಸ್ತಾರ. ಅಧ್ಯಕ್ಷ, ಉಪಾಧ್ಯಕ್ಷ, ಮೆಂಬರ್ರು ಹೋಗ್ತಿವಿ. ಸರ್ಕಾರದ ಯೋಜನೆಗಳನ್ನ ತಿಳಿಸ್ತಾರ, ದುಡ್ಡು ಸ್ಯಾಂಕ್ಷನ್ ಆದ ಬಗ್ಗೆ ಹೇಳ್ತಾರ. ಎಲ್ಲಾ ಲೆಕ್ಕ-ಪತ್ರ ಇರುತ್ತ. ನಾವೆಲ್ಲಾ ಮಾತಾಡಿ ಹೂಂ ಅಂತಿವಿ. ನಮ್ಮ ಹಳ್ಳಿ ಸಮಸ್ಯೆ ಬಗ್ಗೆ ನಾವೆಲ್ಲಾ ಹೇಳ್ತವಿ. ಮೊದ್ಲು ಅರೆದ (ಪರಿಚಯವಿಲ್ಲದ) ಗಂಡಸರ ಜೊತಿ ಕೂಡಾಕ ಹೆದರಿಕಿ ಆಗ್ತಿತ್ತು. ಈಗ ಧೈರ್ಯ ಬಂದೈತಿ.

ಊರೋರು, ಬೇರೆ ಗ್ರಾಮದೋರು ಕರದು ನನ್ನ ಸನ್ಮಾನಿಸ್ತಾರ, ಹೂ-ಹಾರ ಹಾಕಿ ಹಣ್ಣು ಕೊಡ್ತಾರ. ಆಗ ಊರ ಹಿರ್‍ಯಾರು, ಎಂ.ಎಲ್.ಎ. ಸಾಹೇಬ್ರು, ಸರ್ಕಾರದೋರು ಇರ್‍ತಾರ. ಅವರ ಜೊತಿ ನನ್ನ ಕೂಡಿಸಿರತಾರ, ನನ್ನ ಬಗ್ಗೆ ನನ್ಗ ಭಾಳ ಹೆಮ್ಮೆ ಅನಿಸತೈತಿ. ನಾನಿನ್ನೂ ಜನಕ್ಕ ಸೇವಾ ಮಾಡಬೇಕು. ಊರ ಜನಾ ಗ್ರಾಮ ಸಭ್ಯಾಗ ಸೇರ್‍ತಾರ. ತಮ್ಮ ಸಮಸ್ಯೆಗಳನ್ನ ತಿಳಿಸ್ತಾರ. ನನ್ನ ಸಹಿ ಮಾಡಿಸ್ಕೊತಾರ. ನಮ್ಮ ಪಂಚಾಯ್ತಿನಾಗ ಈ ಕಡಿ ೧೪ ಮಂದಿ ಗಂಡಸರಿರ್‍ತಾರೆ, ಆಕಡಿ ೮ ಮಂದಿ ಹೆಂಗಸರಿರ್‍ತಾರ (ಸದಸ್ಯೆಯರು) ಅವರ ಮುಂದ ನಾ ಕೂತಿರ್‍ತಿನಿ. ನಮ್ಮ ಮನ್ಯಾಗ ಎಲ್ಲರೂ ಸಹಕಾರ ಕೊಡತಾರ ಸರ್ಕಾರ ಮಂದಿನೂ ಗೌರವದಿಂದ ಮಾತಾಡಿಸ್ತಾರ . ನಾ ಇನ್ನು ಹೆಚ್ಚಿಗೆ ಓದಿ ನಮ್ಮ ಹಳ್ಳಿ ಮಂದಿಗೆ ಒಳ್ಳೇದು ಮಾಡಬೇಕು. ನಮ್ಮ ಅಧಿಕಾರದ ಅವಧಿನ್ನ ಸರ್ಕಾರದೋರು ಹೆಚ್ಚು ಮಾಡಿದ್ರ ವಾಸಿ. ಗಂಡಸರು ಒಮ್ಮೊಮ್ಮೆ ತಪ್ಪು ಮಾಹಿತಿ ಕೊಡ್ತಾರ ಇದು ಬದಲಾಗಬೇಕು. ಊರ ಮಂದಿ ತೆರಿಗೆ ಕಟ್ಟೊದಿಲ್ಲ. ನೀರಿಲ್ಲ, ಕರೆಂಟಿಲ್ಲ ನಿವೇನ್ ಕೆಲ್ಸ್ ಮಾಡಿರಿ? ಅಂತ ಬಯ್ಯತಾರ. ಎಲ್ಲಾ ಗ್ರಾಮದವರು ತಾಲೂಕ ಪಂಚಾಯಿತ್ಯಾಗ ಸೇರಿದಾಗ ಅವರವರ ಗ್ರಾಮದ ಸಮಸ್ಯೆ ತಿಳಿಯುತ್ತ. 'ನಾ ವಿಧಾನಸೌಧಕ್ಕೂ ಹೋಗಿಬಂದಿನ್ರಿ' ಸರ್ಕಾರದೊರು ನಮ್ಮ ಬಗ್ಗೆ ಕಾಳಜಿ ತೋರ್‍ಗೋಬೇಕು. ಎಂದು ಹೇಳಿ ಮಾತು ಮುಗಿಸಿದ್ರು.

## ಪ್ರಕರಣ: ೨

ಕುಷ್ಟಗಿ ತಾಲೂಕಿನಿಂದ ೨೬ ಕಿ.ಮಿ. ದೂರದಲ್ಲಿರುವ 'ನಾಗರಾಳ' ಗ್ರಾಮದ ದ್ಯಾಮವ್ವ ನಾಗರಾಳ ಗ್ರಾಮ ಪಂಚಾಯತಿ ಸದಸ್ಯೆ. ಅವರನ್ನು ಕಾಣಲು ಹೋದಾಗ ಮನೆ ಮುಂದೆ ಬಟ್ಟೆ ತೊಳಿತಿದ್ರು, ಸುತ್ತಲೂ ಕೊಳಚೆ ನೀರು ನಿಂತಿತ್ತು. ಅನತಿ ದೂರದಲ್ಲಿ ನೀರಿನ ಟ್ಯಾಂಕ್ ಇತ್ತು. ನಮ್ಮನ್ನು ನೋಡಿ 'ಸರ್ಕಾರದೋರೆನ್ರಿ? ಅಂತ ಕೇಳುತ್ತಲೇ ಬಂದ್ರು. ಅಧ್ಯಯನಕ್ಕಾಗಿ ಎಂದಾಗ ಮನೆ ಒಳಗಡೆ ಕೂಡಿಸಿದ್ರು. ನಾನು ಮನೆಯೊಳಗೆ ಕಣ್ಣಾಡಿಸಿದೆ. ದೊಡ್ಡದಾದ ಒಂದೇ ರೂಮು. ಅದರೊಳಗೆ ಭಾಗ ಮಾಡಿ ಆಕಡೆ ಅಡುಗೆ ಮನೆ ಮಾಡಿಕೊಂಡಿದ್ರು. ಈಕಡೆ ಕಿರಾಣಿ ಅಂಗಡಿ ಇಟ್ಕೊಂಡಿದ್ರು. ಸದಸ್ಯತ್ವ ಇವರ ಜೀವನದಲ್ಲಿ ಬದಲಾವಣೆ ತಂದಿದೆಯಾ? ಎಂಬ ಬಗ್ಗೆ ಯೋಚಿಸುತ್ತಾ ಅವರನ್ನು ಮಾತಿಗೆಳೆದೆ. ನಿಮ್ಮ ಬಗ್ಗೆ, ನಿಮ್ಮ ಅಧಿಕಾರ ಕಾರ್ಯಗಳು, ಸಾಧನೆಗಳ ಬಗ್ಗೆ ಹೇಳಿ ಎಂದಾಗ –

'ನನ್ನ ಹೆಸ್ರು ದ್ಯಾಮವ್ವ, ನನ್ನ ಗಂಡನ ಹೆಸರು ಬಸವರಾಜ, ಗ್ರಾಮಪಂಚಾಯತ್ಯಾಗ ವಾಟರ್‌ಮನ್ ಆಗಿರುವರು. ನನ್ನ ಮದ್ವಿಯಾದಾಗ ನನ್ಗ ೧೩ ವರ್ಷ. ತವರು ಮನೆಯವರು ಮತ್ತು ಗಂಡನ ಮನೆಯವರು ಬಡವರು. ಕೂಲಿ ಮಾಡಿ ಜೀವನ ಸಾಗಿಸ್ತಿದ್ವಿ. ಸರ್ಕಾರದೋರು ಆಶ್ರಯ ಮನಿ

ಕೊಟ್ರು. ಮನ್ಯಾಗ ಕಿರಾಣಿ ಅಂಗಡಿ ಇಟ್ಕೊಂಡಿವಿ. ನಾನು ಸಾಲಿ ಕಲಿತಿಲ್ಲ. ನಮ್ಮೂರ ಹಿರ್ಯಾರು 'ನೀ ಒಳ್ಳೆಕದಿ, ಬಡವಳದಿ. ಚುನಾವಣೆಗೆ ನಿಂತ್ಕೊ ಅಂದ್ರು. ಅವರ ಮಾತ ಮೀರದ ಚುನಾವಣ್ಯಾಗ ನಿಂತೆ. ನನ್ನ ವಿರುದ್ಧ ನನ್ನ ಅಣ್ಣನ ಹೆಂಡ್ತಿನ್ನ ನಿಲ್ಲಿಸಿದ್ರು. ನಾ ಗೆದ್ದೆ, ಅವರು ಸೋತ್ರು, ಅವಾಗಿಂದ ತವರ ಮನಿ ಸಂಬಂಧ ಕಡದಹೋಯ್ತು. ಈ ಊರಾಗ ನಾ ಒಬ್ಬಳೇ ಮಹಿಳಾ ಪಂಚಾಯ್ತಿ ಸದಸ್ಯೆ.

ನನ್ಗ ನನ್ನ ಹೆಸರು ಬರೆದು ಸಹಿ ಮಾಡೋಕ ಬರತೈತಿ. ಮನ್ಯಾಗ ನನ್ನ ಮೈದನಂದ್ರು ಶಾಣ್ಯಾರು. ಸಾಲಿ ಮಾಸ್ತಾರ ಆಗ್ಯಾರ. ನನ್ನ ಮಕ್ಕಳು ಸಾಲಿಗೆ ಹೋಗ್ತಾರ. ಅವರು ಓದಬೇಕಾದ್ರ ನನ್ಗೂ ಸ್ವಲ್ಪ ಹೇಳಿ ಕೊಡ್ತಾರ, ಮೊದ್ಲೆಲ್ಲಾ ನಾ ಭಾಳ 'ದಡ್ಡಿ' ಅನಿಸ್ತಿತ್ತು. ನಮ್ಮ ಕಾಲದಾಗ ಹೆಣ್ಣಮಕ್ಕಳನ್ನು ಓದಿಸತಿದ್ದಿಲ್ಲಾ. ಇದೀಗ ಸ್ವಲ್ಪ ಓದ್ತಿನಿ, ಧೈರ್ಯ ಬಂದೈತಿ. ಗ್ರಾಮಪಂಚಾಯತಿ ಮೀಟಿಂಗ್ ತಿಂಗಳಿಗೊಮ್ಮೆ ಇರುತ್ತ, ಮೀಟಿಂಗಗೆ ಹೋದ್ರ ೧೦೦ ರೂಪಾಯಿ ಭತ್ಯೆ ಕೊಡ್ತಾರ. ನಾನು ಸದಸ್ಯಳು. ನಮ್ಮೂರಿನಿಂದ ನಾ ಒಬ್ಬಕಿ ಹೆಣ್ಣಮಗಳು ಸದಸ್ಯೆ ಅಂತ ನನ್ನ ಮಾತ ಕೇಳಲ್ಲ, ಆದ್ರೂ ನಾ ವಾದಿಸ್ತಿನಿ. ನಮ್ಮೂರಿನ ರಸ್ತೆ, ಬೀದಿ ದೀಪ, ಬಂಡಿ ಹಾಕಿಸೋದು, ಕೈಪಂಪ್ ವ್ಯವಸ್ಥೆ ಸಲುವಾಗಿ ಅಧ್ಯಕ್ಷರ ಜೊತೆ ಜಗಳವಾಗುತ್ತೆ. ನಮ್ಮೂರ ಮಂದಿ ನನ್ನ ಮೇಲೆ ನಂಬಿಕೆ ಇಟ್ಟ ಕಳಿಸ್ಯಾರ, ಆದ್ರ ಚರಂಡಿ ವ್ಯವಸ್ಥೆ ಆಗಿಲ್ಲ. ಊರ ಮಂದಿ ಊರ ಹೊರಗ ದೊಡ್ಡಿಗ ಹೋಗ್ತಾರ, ಶೌಚಾಲಯಕ್ಕಂತ ೫೦೦ ರೂಪಾಯಿ ಕೊಟ್ರ ಆಗತೈತೇನ್ರಿ? ಊರ ಮಂದಿ ನನ್ನ ಬಯ್ಯಿತಾರ. ಹೆಣ್ಣ ಮಕ್ಕಳು ಅರ್ಥ ಮಾಡ್ಕೋತಾರ, ಆದ್ರ ಕೆಲ್ಸ ಆಗದಿದ್ರ ಗಂಡಸರು ಕುಡಿದ ಬಂದು ಕೂಗಾಡ್ತಾರ. 'ಶಿವ ನಿಂದಪ' ಅಂತೀನಿ. ನಮ್ಮನ್ಯಾಗ (ಗಂಡ) ಇರಬೇಕು ಆ ಹೊತ್ತಿನಾಗ. ಆದ್ರೂ ನಾ ಹೆದರಲ್ಲ, ನಾ ಪಂಚಾಯ್ತಿ ಸದಸ್ಯಳಾದ ಮೇಲೆ ಇಷ್ಟು ದಿನ ಇರದಿದ್ದ ಎಷ್ಟೊ ಕೆಲ್ಸ ಮಾಡ್ಸಿನಿ. ಇನ್ನೂ ಮಾಡಿಸಬೇಕು, ಮಾಡಿಸ್ತಿನಿ.

ಬಜೆಟ್ ಬಗ್ಗೆ ಅಧ್ಯಕ್ಷರು, ಉಪಾಧ್ಯಕ್ಷರು, ಸೆಕ್ರೆಟರಿಯವರು ತಿಳಿಸ್ತಾರ. ನಾವು ಮೂರ್‍ನಾಕು ಜನಾ ಹೆಣ್ಣ ಮಕ್ಕಳು (ಸದಸ್ಯರು) ಪ್ರಶ್ನೆ ಕೇಳ್ತೀವಿ. ಆದ್ರೂ ಸರ್ಕಾರದೋರು ಮೆಂಬರ್ಸ್‌ಗೆ ಹೆಚ್ಚಿನ ಅಧಿಕಾರ ಕೊಟ್ಟಿಲ್ಲ. ಬೆಂಗಳೂರನ್ಯಾಗ ಕೂತು ಕುಮಾರ ಸ್ವಾಮಿ (ಸಿ.ಎಂ.) ಹೇಳ್ತಾರ, ಅವರಿಗೇನ ಗೊತ್ತು ನಮ್ಮೂರ ಸಮಸ್ಯೆ, ಬರೀ ಹಳೆದೇ ಯೋಜನೆಗಳು. ನಮ್ಮೂರಿಗೆ ಹೊಸಾ ಯೋಜನೆಗಳು ಬಂದಿಲ್ಲ. ಆಶ್ರಯ ಮನಿ ನಮ್ಮೂರಿಗೆ, ನಿಮ್ಮೂರಿಗೆ ಅಂತ ಬಡದಾಡತಾರಿ, ಗಂಡಸರು ಜಾಸ್ತಿ ಕೇಳಿದ್ರ, ನಾವು ವಾದಿಸ್ತಿವಿ.

ಪಂಚಾಯ್ತಿ ಮೀಟಿಂಗ್ ಇಲ್ಲದಾಗ ಮನಿ ನೋಡ್ಕೋತಿನಿ. ಮುಂದುವರಿಯಬೇಕು ಅನ್ನೋ ಛಲ ನನ್ಗ ಬಂದೈತಿ. ಮೊದ್ಲು ನಾಚಿಕೆ, ಹಿಂಜರಿಕೆ ಆಗ್ತಿತ್ತು. ಇದೀಗ ಎಲ್ಲಾರ ಜೊತಿ ಮಾತಾಡ್ತೀವಿ. ನಮ್ಮ ಸಮಸ್ಯೆ ಹೇಳ್ಕೊತೀವಿ. ತಾಲ್ಲೂಕಿನಲ್ಲಿ ಮೀಟಿಂಗ ಇದ್ದಾಗ ಎಲ್ಲ ಗ್ರಾಮದೋರು ಬರ್‍ತಾರೆ. ಆಗ ಕಷ್ಟ

ಸುಖ ಹಂಚಿಕೋತೀವಿ. ನಾವು ಹಣ್ಣುಮಕ್ಕಳೇ ವಾಸಿ, ಕೆಲ್ಸ ಮಾಡಿಸ್ತೀವಿ, ನಮ್ಗ ಜವಾಬ್ಧಾರಿ ಭಾಳ ಐತಿ. ನಾ ಕೇಳೊದಿಷ್ಟೆ. ಸರ್ಕಾರ ನಮ್ಗ ಇನ್ನೂ ಹೆಚ್ಚಿನ ಅಧಿಕಾರ ಕೊಡ್ಬೇಕು. ಜನಕ್ಕ ಮೋಸ ಮಾಡಬಾರ್ದು. 'ಅವರಿಗೆ ಒಳ್ಳೆದ ಮಾಡಿದ್ರೆ ನಮ್ಮನ್ನ ಆರಿಸ್ತಾರ ಇಲ್ಲಂದ್ರ ಮನಿಗೆ ಹೋಗಿ ಅಂತಾರ' ಎಂದು ತಮ್ಮ ಅಭಿಪ್ರಾಯ ತಿಳಿಸಿದ್ರು.

## ಪ್ರಕರಣ: ೩

ಯಲಬುರ್ಗಾ ತಾಲೂಕಿನ ಹಿರೇ ಅರಳಿಹಳ್ಳಿ ಗ್ರಾಮಕ್ಕೆ ನಾನು ಹೋದಾಗ ಬೆಳಗ್ಗೆ ೧೧ ಘಂಟೆ. ಅಲ್ಲಿ ನನಗಂದು ಸಂತಸ ಕಾದಿತ್ತು. ಕಾರಣ ಹಿರೇಅರಳಿಹಳ್ಳಿ ಗ್ರಾಮಪಂಚಾಯತಿಗೆ ಸೇರಿರುವ ೫ ಗ್ರಾಮ ಪಂಚಾಯತಿಗಳ ಸದಸ್ಯರು, ಅಧ್ಯಕ್ಷ ಹಾಗೂ ಉಪಾಧ್ಯಕ್ಷರು ಅಂದು ತಿಂಗಳ ಮೀಟಿಂಗ್ (ಸಭೆ) ನಲ್ಲಿ ಸಭೆ ಸೇರುವವರಿದ್ದರು. ಒಂದು ಘಂಟೆ ಹೊತ್ತು ಅವರಿಗಾಗಿ ಕಾದೆ. ಸೆಕ್ರೆಟರಿ ಗ್ರಾಮಪಂಚಾಯತಿಗೆ ಬಂದ ಸದಸ್ಯರನ್ನು ಪರಿಚಯಿಸಿದರು. ನಾನು ಹಂಪಿ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವೆ ಅಂದಾಗ, ಪರಿಚಿತರಂತೆ ನನ್ನ ಮಾತನಾಡಿಸಿ ವಿಶ್ವವಿದ್ಯಾಲಯ ನಮ್ಗೆ ಗೊತ್ತು ಅಂದರು. ನಂತರ ನನಗೆ ತಿಳಿದ ವಿಷಯವೆಂದರೆ ತಿಂಗಳ ಮೊದಲು 'ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗ' ದವರು 'ಗ್ರಾಮಪಂಚಾಯತಿ ಮಟ್ಟದಲ್ಲಿ ಶಾಲಾ ಅಭಿವೃದ್ಧಿ' ಎಂಬ ಬಗ್ಗೆ ಹಿರೇಅರಳಿಯಲ್ಲಿ ಶೈಕ್ಷಣಿಕ ಸಮಾಲೋಚನೆ ಕಾರ್ಯಾಗಾರ ಏರ್ಪಡಿಸಿದ್ದರೆಂದು, ಹೀಗಾಗಿ ನಾನವರಿಗೆ ಪರಿಚಿತಳಾಗಿ ಕಂಡಿದ್ದೆ.

ನಾನಲ್ಲಿ ಮೊದಲು ಸಂದರ್ಶಿಸಿದ್ದು ಪ್ರೌಢ ವಯಸ್ಸಿನ ಮುಖದಲ್ಲಿ ತೇಜಸ್ಸು ಹೊಂದಿದ್ದ ಸದಸ್ಯೆ 'ನಿಂಗಮ್ಮ ಹೂಗಾರ' ಅವರನ್ನು. ನಿಂಗಮ್ಮ ಹೂಗಾರ ಅವರು ಕಲಕಬಂಡಿ ಗ್ರಾಮಪಂಚಾಯತಿಯ ಸದಸ್ಯಳಾಗಿ ಕಾರ್ಯನಿರ್ವಹಿಸಿದ ಬಗ್ಗೆ, ಗ್ರಾಮದ ಸಮಸ್ಯೆಗಳ ಬಗ್ಗೆ ಹೇಳುತ್ತಾ ಹೋದರು. 'ನನ್ನ ಹೆಸರು ನಿಂಗಮ್ಮ ಹೂಗಾರ, ನಾನು ಕಲಕಬಂಡಿ ಗ್ರಾಮದವಳು. ೨ ನೇಯ ಕ್ಲಾಸವರೆಗೂ ಓದಿರುವೆ. ಬರೆಯೋಕೆ, ಓದೋಕೆ ಚನ್ನಾಗಿ ಬರುತ್ತೆ. ಮದ್ವೆಗೆ ಮೊದಲು ತವರಿನಲ್ಲಿದ್ದಾಗ, ೧೨ ಕೂರಿಗಿ ಜಮೀನು ೨ ಮನೆಗಳಿದ್ದವು. ಯಜಮಾನ್ರು ರಾಜಕೀಯ ಆಸಕ್ತಿ ಹೊಂದಿದ್ದರು, ಪಕ್ಷಕ್ಕಾಗಿ ಓಡಾಡತಿದ್ರು. ಅವರು ತೀರಿಹೋದ ನಂತರ ಊರಿನ ಹಿರಿಯರು ಚುನಾವಣೆಯಲ್ಲಿ ಸ್ಪರ್ಧಿಸಲು ಒತ್ತಾಯಿಸಿದ್ರು. ನನಗೂ ರಾಜಕೀಯ ರಂಗ ಆಸಕ್ತಿ ಕ್ಷೇತ್ರ. ಸಾಮಾನ್ಯ ಅಭ್ಯರ್ಥಿಯಾಗಿ ಆರಿಸಿಬಂದೆ.

ಗ್ರಾಮಪಂಚಾಯತಿಯಲ್ಲಿ ತಿಂಗಳಿಗೆ ಅಥವಾ ೨ ತಿಂಗಳಿಗೊಮ್ಮೆ ಸಭೆ ನಡೆಸುವರು. ಮೀಟಿಂಗ್ ಇರುವ ೨ ದಿನ ಮುಂಚಿತವಾಗಿ ಎಲ್ಲಾ ಸದಸ್ಯರಿಗೆ ನೋಟಿಸ್ ಕಳಿಸ್ತಾರೆ. ಎಲ್ಲಾ ಸದಸ್ಯರು ಅಂದು ಸಭೆ ಸೇರಿ ತಮ್ಮ ಸಮಸ್ಯೆಗಳ, ಸರ್ಕಾರಿ ಯೋಜನೆಗಳ, ಸರ್ಕಾರದಿಂದ ಬಂದ ಅನುದಾನಗಳ ಬಗ್ಗೆ ಚರ್ಚಿಸುತ್ತಾರೆ. ಭತ್ಯೆ ಅಂತೆ ೧೦೦ ರೂಪಾಯಿ ಎಲ್ಲಾ ಸದಸ್ಯರಿಗೆ ಕೊಡ್ತಾರೆ. ಪುರುಷರು ನಮ್ಮನ್ನು ಪ್ರಶ್ನೆ ಕೇಳಲು ಹುರಿದುಂಬಿಸ್ತಾರೆ. 'ಸುಮ್ನೆ ಕೂತ್ರೆ ಮಬ್ಬಾಗ್ತಿರಿ ಪ್ರಶ್ನೆ ಕೇಳ್ರಿ' ಅಂತಾರೆ. ಸರ್ಕಾರದಿಂದ ಬಂದ ಅನುದಾನಿತ ಯೋಜನೆಗಳನ್ನು ೭ ಹಳ್ಳಿಗಳಲ್ಲಿ ಹಂಚಬೇಕು. ಆಗಾಗ ಈ ಹಂಚಿಕೆ ವಿಷ್ಯಕ್ಕೆ ಜಗಳಾಗುತ್ತೆ. ಎಲ್ಲಾ ಸದಸ್ಯರಿಗೂ ಅವರದೇ ಆದ ಜವಾಬ್ದಾರಿಗಳಿರ್ತಾವೆ. ಅವರವರ ಕ್ಷೇತ್ರದ ಜನಕ್ಕೆ ಅವರು ಉತ್ತರಿಸಬೇಕು. ಅಧ್ಯಕ್ಷರು ಎಲ್ಲಾ ಹಳ್ಳಿಗೂ ಹಂಚತಾರೆ. ಯೋಜನಾ ಫಲ ಸಿಗದಿದ್ದವರಿಗೆ ಮುಂದಿನ ಸಾರಿ ಬರುವ ಅನುದಾನಿತ ಯೋಜನೆಗಳನ್ನು ನಿಮ್ಗೆ ಕೊಡ್ತೀವಂತ ಸಮಾಧಾನಿಸ್ತಾರೆ. ನಾ ತಿಳಿದ ಹಾಗೆ ಹೆಣ್ಣುಮಕ್ಕಳು ಅಧ್ಯಕ್ಷರಾದ್ರೆ ಗ್ರಾಮಗಳನ್ನು ಸಮನಾಗೆ ಕಾಣ್ತಾರೆ.

ಪದೇಪದೇ ಸಭೆ ಸೇರುವುದು ಅನಾವಶ್ಯಕ. ಗ್ರಾಮದ ಜನರ ಮೂಲಭೂತ ಸಮಸ್ಯೆಗಳನ್ನು ಗುರುತಿಸಿ, ಪರಿಹಾರ ಕಂಡುಹಿಡಿವ ಮೂಲಕ ಅಧ್ಯಕ್ಷ-ಉಪಾಧ್ಯಕ್ಷರು ಹಾಗೂ ಸದಸ್ಯರು ಕೆಲ್ಸ ಮಾಡುವದರಿಂದ ಸಭೆ ಅನಗತ್ಯ ಅಂತ ನನ್ನ ಭಾವನೆ. ನಮ್ಮೂರಿನ ಮೂಲ ಸಮಸ್ಯೆ ನೀರು. ದೊಡ್ಡ ದೋಣಿಂದ ನೀರು ತರ್ತೀವಿ. ಅಧ್ಯಕ್ಷರು ಎಷ್ಟಂತ ಮಾಡ್ತಾರೆ? ಎರಡೂವರೆ ವರ್ಷಕ್ಕೊಮ್ಮೆ ಅಧ್ಯಕ್ಷರು ಬದಲಾವಣೆ ಆಗೋದ್ರಿಂದ ಸಮಸ್ಯೆಗಳ ಪರಿಹಾರಕ್ಕೆ ಕಾರ್ಯ ಕೈಗೊಳ್ಳುವದರಲ್ಲಿ ಅವಧಿ ಮುಗಿದಿರುತ್ತದೆ. ಮತ್ತೆ ಇನ್ನೊಂದು ಸಮಸ್ಯೆ ಬರುತ್ತೆ. ರಾಜಕೀಯ ತರಬೇತಿ ಸದಸ್ಯರಿಗೆ ೬ ತಿಂಗಳಿಗೊಮ್ಮೆ ಕೊಡ್ತಾರೆ. ಎಲ್ಲ ಯೋಜನೆಗಳನ್ನು ವಿವರಿಸ್ತಾರೆ.

ಗ್ರಾಮಪಂಚಾಯತಿಯೊಳಗೆ ಹೆಣ್ಣುಮಕ್ಕಳಿಗೆ ಮುಂದ ಬರೋಕೆ ಅವಕಾಶ ಕೊಟ್ಟಾರ. ಆದ್ರ ಓದಿದೋರು ಚುನಾವಣೆಗೆ ನಿಲ್ಲಬೇಕು. ಯಾಕಂದ್ರ ಪ್ರತಿಯೊಂದನ್ನು ಪ್ರಶ್ನಿಸೋರು ಬರ್ಬೆಕು. ಕಲಿತವರಿದ್ರ, ಧೈರ್ಯವಂತವರಿದ್ರ ರಾಜಕೀಯದಾಗ ಇರ್ತಾರ. ಜನಾ ಒಮ್ಮೆ ಹೊಗಳ್ತಾರೆ, ಒಮ್ಮೆ ಬಯ್ಯುತಾರೆ. ಜನರಿಗಾಗಿ ಕೆಲ್ಸ ಮಾಡಿದ್ರ ನಮ್ಮ ಆತ್ಮಕ್ಕೂ ತೃಪ್ತಿ; ಎಂದು ಹೇಳಿದ ನಿಂಗಮ್ಮ ತುಂಬಾ ಪ್ರೌಢ ಸದಸ್ಯರಾಗಿ ಕಂಡರು. ಅವರ ಅಭಿಪ್ರಾಯದಲ್ಲಿ ಸರ್ಕಾರ ಇನ್ನು ಹೆಚ್ಚಿನ ಅವಕಾಶ, ಸ್ವಾತಂತ್ರ್ಯವನ್ನು ಮಹಿಳೆಯರಿಗೆ ಕೊಡಬೇಕು. ಮುಂಬರುವ ಚುನಾವಣೆಗೆ ನಾ ಸ್ಪರ್ಧಿಸೋದಿಲ್ಲ. ನಿಮ್ಮಂತೋರು, ಓದಿದೋರು ಮುಂದ ಬರ್ಲಿ ಅನ್ನೋದ ನನ್ನಾಸೆ ಎಂದು ಹೇಳಿ ಮಾತು ಮುಗಿಸಿದ್ರು.

## ಪ್ರಕರಣ: ೮

ಯಲಬುರ್ಗಾ ತಾಲೂಕಿನ ಹೀರೆಮನ್ನಾಪುರ ಗ್ರಾಮಕ್ಕೆ ಸಾಯಂಕಾಲ ೮ ಘಂಟೆಗೆ ನಾವು ಹೋದಾಗ, ಉಪಾಧ್ಯಕ್ಷ ಹಾಗೂ ಸದಸ್ಯೆಯರು ಸಿಗಲಿಲ್ಲ. ಹೆಚ್ಚು ಸದಸ್ಯೆಯರು ಒಕ್ಕಲುತನವನ್ನು ಮೂಲ ಉದ್ಯೋಗವನ್ನಾಗಿರಿಕೊಂಡಿದ್ದರಿಂದ ಬೆಳಗ್ಗೆ ಹೋದೊರು ಸಾಯಂಕಾಲ ೫ ರ ನಂತರವೇ ಮನೆಗೆ ಬರುತ್ತಾರೆಂದು ಅಲ್ಲಿಯ ಮಠದ ಅಜ್ಜಿ ಹೇಳಿದ್ರು. ನನ್ಗೆ ಹೀರೆಮನ್ನಾಪುರ ಗ್ರಾಮಪಂಚಾಯತಿಯ ಉಪಾಧ್ಯಕ್ಷೆ ದೇವಮ್ಮ ಕಜ್ಜಿಯವರನ್ನು ಸಂದರ್ಶಿಸಬೇಕಿತ್ತು. ತುಂಬಾ ಸಮಯ ಕಾದನಂತರ ಊರಿಗೆ ಹೋಗಿದ್ದ 'ದೇವಮ್ಮ' ಬಸ್‌ನಿಲ್ದಾಣದಿಂದ ಮನೆಗೆ ಹೊರಟಿದ್ರು. ನಮ್ಮಣ್ಣ ಹೋಗಿ ಕರೆದಾಗ ಬಂದ್ರು. ನನ್ನ ನಾನು ಪರಿಚಯಿಸಿಕೊಂಡೆ. ನಿಮ್ಗೆ ಏನು ಕೇಳಬೇಕಾಗಿದೆಯೋ ಕೇಳ್ರಿ, ಅಷ್ಟು ದೂರದಿಂದ ಬಂದಿರಿ. ಅಂತಾ ಮಾತು ಪ್ರಾರಂಭಿಸಿ ನನ್ನ ಕೆಲ್ಸ ಹಗುರ ಮಾಡಿದ್ರು. ಅವರನ್ನು ಸಂದರ್ಶಿಸಿದಾಗ ದೊರಕಿದ ಮಾಹಿತಿ ಹೀಗಿದೆ.

ನಾನು ೫ ನೇ ಕ್ಲಾಸವರೆಗೆ ಓದಿದೀನಿ. ಓದೋಕ, ಬರಿಯೋಕ ಬರತ್ತ. ನಮ್ಮ ತವರು ಮನ್ಯಾಗ ನಮ್ಮಮ್ಮ-ಅಪ್ಪ ವಿಚಾರವಂತರಿದ್ರು. ಆಗಿನ ಕಾಲದಾಗ ಎಲ್ಲಾ ಮಕ್ಕಳಿಗೆ ವಿದ್ಯೆ ಕೊಡಿಸಿದ್ರು. ಇಗೀನ ಕಾಲದಾಗ ೫ ನೇ ಕ್ಲಾಸ ಏನು ಅಲ್ಲ ಬಿಡ್ರಿ. ಆದ್ರ ನಮ್ಮ ಕಾಲದಾಗ ಅದ ದೊಡ್ಡದು. ಹೆಣ್ಣಮಕ್ಕಳಂತ ಭೇದ ಮಾಡದೆ ನಮ್ಮಪ್ಪ ನಮ್ಮನ್ನ ಬೆಳಸಿದ. ಇದು ನನ್ನ ಜೀವನಕ್ಕ ಸಹಾಯಾಯ್ತು. ಯಾಕಂದ್ರ ಗಂಡನ ಮನಿಯವ್ರು ಸ್ಥಿತಿವಂತರು. ನಾ ಓದಿನಂತ ನನ್ನ ಗಂಡ ನನ್ನ ಒಪ್ಪಿದ್ರು. ಗಂಡನ ಮನಿಯೊಳಗ ಮಾವ ಹಾಗೂ ನಮ್ಮನಿಯೋರಿಗೆ ರಾಜಕೀಯ ನಂಟಿತ್ತು. ರಾಜಕಾರಣದೋರು ನಮ್ಮನಿಗೆ ಬಂದು-ಹೋಗೋರು. ನಮ್ಮ ಯಜಮಾನ್ರು 'ಊರ ಸುಧಾರಣೆ' ಅಂತ ಓಡಾಡತಿದ್ರು. ತವರ ಮನ್ಯಾಗನೂ ನಮ್ಮ ಸೋದರಮಾವ ರಾಜಕೀಯದಾಗ ಇಳಿದಿದ್ರು. ನಮ್ಮ ಯಜಮಾನ್ರು ತೀರಿಹೋದ ಮ್ಯಾಲೆ ಮಕ್ಕಳ ಜವಾಬ್ಧಾರಿ ನನ್ಗ ಬಿತ್ತು. ಒಬ್ಬ ಮಗ, ಇಬ್ಬರು ಹೆಣ್ಣಮಕ್ಕಳು. ದುಡ್ಡಿಗೆ ಕೊರತಿರಲಿಲ್ಲ. ಮಗ ರಾಜಕೀಯ ಬೇಡಂದ. ನಾನು ನಿಲ್ಲತೀನಿ, ನೀ ಬೇಡಂದ್ರ ಬಿಡು ಅಂದೆ. ಗಾಂಧಿ ವೇಳ್ಯಾಗ ಹೆಣ್ಣ ಮಕ್ಕಳು ಬ್ರಿಟಿಷರ ವಿರುದ್ಧ ಹೋರಾಡಿದ್ರು. ನಾವೇನ ಮಹಾ ಅನಕೊಂಡೆ, ಚುನಾವಣೆಗೆ ನಿಂತೆ. ಹಿಂದುಳಿದ ಪಂಗಡದವರು ನಾವು. ಸೀಟಂತೂ ಕೊಟ್ರು, ಗೆದ್ದೆ. ನಮ್ಮೂರ ಗೌಡರು 'ನಿನ್ನಿಂದ ಊರ ಸುಧಾರಿಸುತ್ತ, ನಿನ್ನ ನೋಡಿ ಹೆಣ್ಣ ಮಕ್ಕಳು ಮುಂದ ಬರ್ತಾರ ಚುನಾವಣೆಗೆ ನಿಲ್ಲು, ಅಂತಂದ್ರು. ನಮ್ಮ ಊರಾಗಿರೋ ಹೆಚ್ಚಿನ ಸದಸ್ಯರು ಓದಿಕೊಂಡೋರೆ. (ಪಕ್ಕದಲ್ಲಿದ್ದ ಸದಸ್ಯೆಯರನ್ನು ತೋರಿಸಿ ೭ ನೇ ಕ್ಲಾಸ್ ಓದ್ಯಾಳವ್ವ ಅಂದ್ರು). ಪಂಚಾಯ್ತಿ ಅಧ್ಯಕ್ಷಳಾದೆ. ಅವಧಿ ಮುಗಿದ ನಂತರ ಸದಸ್ಯಳಾಗಿದ್ದೆ. ಇದೀಗ ಉಪಾಧ್ಯಕ್ಷಳಾಗಿರುವೆ.

ಅಧ್ಯಕ್ಷೆ, ಉಪಾಧ್ಯಕ್ಷೆ ಹಾಗು ಸದಸ್ಯಳಾಗಿ ನನ್ಗೆ ಅನುಭವ ಐತಂತ ಪಂಚಾಯ್ತಿಯೊಳಗ ಎಲ್ಲಾರೂ ಗೌರವದಿಂದ ನನ್ನ ಮಾತಾಡಿಸ್ತಾರ. ನನ್ನ ಸಲಹೆ ಕೇಳ್ತಾರ. ಅಧ್ಯಕ್ಷರು (ಪುರುಷ) ಹೊಸಬರು. ಅದ್ಕ ಎಲ್ಲಾದಕ್ಕೂ ನನ್ನ ಅಭಿಪ್ರಾಯ ಕೇಳ್ತಾರ. 'ಹಿಂಗಿಂಗ ಮಾಡಬೇಕಪ್ಪ' ಅಂತ ಹೇಳ್ತಿನಿ. ತಿಂಗಳಿಗೊಮ್ಮೆ ಮೀಟಿಂಗ್ ಕರಿತಾರ. ಅಲ್ಲಿ ಯಾವ ವಿಷ್ಯ ಮಾತಾಡಬೇಕು, ಏನೇನ ನಿರ್ಣಯ ತೊಗೋಬೇಕು ಅಂತೆಲ್ಲಾ ಹೇಳ್ತೀನಿ. ಊರ ಮಂದಿ ಗ್ರಾಮಸಭಾ ಸದಸ್ಯರು, ಅವರನ್ನ ಕರಿದು ಅವರ ಅಭಿಪ್ರಾಯ ಕೇಳೋಣ, ಅವರ ಸಮಸ್ಯೆಗಳಿಗೆ ಪರಿಹಾರ ಹುಡುಕೋಣ ಅಂತ ಹೇಳತಿರ್ತೀನಿ. ಉಳಿದ ಸದಸ್ಯರು ಅವರವರ ಅಭಿಪ್ರಾಯ ತಿಳಿಸ್ತಾರ. ಎಲ್ಲಾ ಸದಸ್ಯರು ಕೂಡಿಕೊಂಡ ಕೆಲ್ಸ ಮಾಡ್ತಿವಿ. ಭಿನ್ನಾಭಿಪ್ರಾಯ ಬರೋದಿಲ್ಲಂತಲ್ಲ, ಬರ್ತದ ಆದ್ರ ಶಾಂತರೀತಿಯಿಂದ ಅವರಿಗೆ ತಿಳಿಸಿ ಹೇಳಿದ್ರ ಸರಿಯಾಗುತ್ತ, ನನ್ಗ ದೌರ್ಜನ್ಯ ಇಷ್ಟ ಆಗಲ್ಲ. ಎಲ್ಲಾರೂ ಒಂದ ನನ್ಗ. ದೇವರು ಸಾಕಷ್ಟು ಕೊಟ್ಟಾನ, ಜನರ ಬಾಯಾಗ ದೇವಮ್ಮ ದೊಡ್ಡೋಳು ಅಂತ ಅನಿಸಿಕೊಂಡಿನಲ್ಲ ಸಾಕು. ಮನ್ಯಾಗಿದ್ವಿ, ಬಯಲಿಗೆ ಬಂದ್ವಿ, ನನ್ನ ಶಕ್ತಿ ಮೀರಿ ನಾ ಜನಕ್ಕ ಒಳ್ಳೇದನ್ನ ಮಾಡ್ತೀನಿ.

ನಮ್ಮೂರಿನ ಸದಸ್ಯರು ಓದಿಕೊಂಡಾರ, ಶಾಣ್ಯಾರು, ಅಧ್ಯಕ್ಷರು ಸರ್ಕಾರದ ಯೋಜನೆಗಳ ಬಗ್ಗೆ ಹೇಳಿದಾಗ ಕಾಗದ್ದಾಗ ಬರಕೋತಾರ, ಲೆಕ್ಕ-ಪತ್ರ ಕೇಳ್ತಾರ, ಅದ್ಕ ಸದಸ್ಯರಿಗೆ ತಿಳಿಯೋಹಂಗ ಹೇಳ್ರಿ ಅಂತ ಹೇಳ್ತಿನಿ. ಬೇರೆ ಬೇರೆ ಪಕ್ಷದವರಿದ್ದಾರೆ, ನಮಗೆ ಆಶ್ರಯ ಮನಿ ಕೊಡ್ರಿ ಅಂತ ಜಗಳಾಡ್ತಾರೆ. ಒಂದೊಂದು ಜಾತಿಗೆ ಎರಡು ಮನಿ ಕೊಡಂತ ಹೇಳಿನಿ., ಪ್ರತಿಯೊಂದು ಜನಕ್ಕೆ ಮನಿ ಕೊಡೋಕಾಗಲ್ಲ. ಮುಂದಿನ ಸಾರಿ ಬರ್ತಾವಲ್ಲ, ನಿಮ್ಗ ಮೊದಲು ಕೊಡ್ತೀವಿ ಅಂತಹೇಳಿ ಸಮಾಧಾನಿಸ್ತೀನಿ. ಆರೋಗ್ಯ ಕೇಂದ್ರದವರು ಬಂದಾಗ ಗ್ರಾಮ ಸುಧಾರಣಾ ಕಾರ್ಯಕ್ರಮ ಹಾಕ್ಕೋತಿವೆ. ಬಾಣಂತಿಯರಿಗೆ ಚುಚ್ಚುಮದ್ದು, ಮಕ್ಕಳಿಗೆ ಪೋಲಿಯೋ ಲಸಿಕೆ, ಶಾಲಾ ಮಕ್ಕಳ ಬಿಸಿ ಊಟದ ಮೇಲುಸ್ತುವಾರಿ ಮಾಡ್ತಿವಿ. ಬಡ ಮಕ್ಕಳಿಗೆ ಉಚಿತ ಪುಸ್ತಕ ಕೊಡ್ತಿವಿ. ವಾಟರ್ ಬೋರ್ಡಿನವರು ನೀರಿನ ಟ್ಯಾಂಕ್ ಕಟ್ಟಿಸ್ತಾರ, ಅದರ ಮೇಲ್ವಿಚಾರಣೆ ಮಾಡ್ತೀನಿ.

ಈಗೀನ ಜನ ಭಾಳ ಸುಧಾರಿಸ್ಯಾರ , ಏನರ ತಿಳೀದಿದ್ರ ಪ್ರಶ್ನೆ ಕೇಳ್ತಾರ. ಮನಿ ಮುಂದ ಕಸ ಹಾಕ್ತಾರ, ನಮ್ಗ ತೆಗಿ ಅಂತಾರ. ಸರ್ಕಾರದಿಂದ ದುಡ್ಡು ಬರತೈತಿ ಸುಮ್ನ ತೊಗೊಳ್ಳೋದಲ್ಲ ಕೆಲ್ಸ ಮಾಡ್ರಿ ಅಂತಾರ. ಸರ್ಕಾರದೋರೆನ ಕೊಡ್ತಾರ? ನಾನ ಎಷ್ಟೋ ಸಲ ನನ್ನ ದುಡ್ಡು ಹಾಕ್ಕೊಂಡ ಕೆಲ್ಸ ಮಾಡಿನಿ. ಅಂಗನವಾಡಿ, ಸಾಕ್ಷರತಾ ಕೇಂದ್ರದಿಂದ ಓದ ಬರಲಾರದವರಿಗೆ ಓದ ಹೇಳಿಸ್ತೀವಿ. ನಾನು ಜೊತಿಗಿ ಕೂತಿರ್ತೀನಿ.

ಮನಿಯೊಳಗ ಎಲ್ಲಾರೂ ಸಹಕರಿಸ್ತಾರ. ನಮ್ಗ ರಾಜಕೀಯ ಭಾರ ಅಲ್ಲ. ನಮ್ಮ ದೇಶದಾಗ ಹೆಣ್ಣಮಕ್ಕಳು ಮಾಡೋವಷ್ಟು ಕೆಲ್ಸ, ಗಂಡುಮಕ್ಕಳು ಮಾಡೋದಿಲ್ಲ. ರಾಜಕೀಯಕ್ಕ ಬರೋದಿಕ್ಕಿಂತ ಮೊದ್ಲು 'ಹೊಲ–ಮನಿ' ಎರಡೂನ್ನು ತೂಗಿಸ್ಕೊಂಡ ಹೋಗ್ತಿದ್ವಿ. ಇದೀಗ 'ರಾಜಕೀಯ–ಮನಿ' ನೋಡಕೊಂಡ ಹೋಗ್ತೀವಿ. ಕೂತು ತಿಂದ್ರ ಏನೂ ಸಾಕಾಗೋದಿಲ್ಲ. ದುಡದ ತಿಂದ್ರ ಎಲ್ಲಾ ಸಿಗತೈತಿ. ಪಂಚಾಯ್ತಿ ಪ್ರವೇಶ ಮಾಡಿ ೧೦–೧೫ ವರ್ಷಾಯ್ತು. ಅಧ್ಯಕ್ಷ, ಸದಸ್ಯ ಏನಾರ ಆಗ್ಲಿ, ಮಂದಿ (ಜನ) ಮರ್ಯಾದಿ ಕೊಡ್ತಾರ. ಅಕ್ಕ–ಪಕ್ಕದೊರು ಗೌರವಿಸ್ತಾರ. ಬಂಧು–ಬಳಗ ಹೆಮ್ಮೆ ಪಡ್ತಾರ. ಊರೊಳಗ ಏನಾರ ಕಾರ್ಯ ಆದ್ರೂ ನಾವು ಹೆಣ್ಣಮಕ್ಕಳರ್ತೀವಿ. ಈ ಗೌರವ–ಪ್ರೀತಿ ಮುಂದ ಇನ್ನಾವದೈತಿ? ಅದಕ್ಕ ಜನಕ್ಕ ಒಳ್ಳೆದ ಮಾಡಿಯೇ ಹೋಗೋದಂತ ಮಾಡಿನಿ. ಅಲ್ಲೆನಕ್ಕಾ? ಅಂತ ಪಕ್ಕದಲ್ಲಿದ್ದ ಮಹಿಳಾ ಸದಸ್ಯರನ್ನ ಪ್ರಶ್ನಿಸಿದರು ದೇವಮ್ಮ.

ರಾಜಕೀಯ ಪಕ್ಷಗಳ ಪ್ರಭಾವ ಪಂಚಾಯ್ತಿಗೂ ಆಗೇತಿ. ನಮ್ಮ ಮನ್ಯಾಗ ಎಲ್ಲಾರೂ ಕಾಂಗ್ರೆಸ್ ಅಂತಾರ, ನಾನು ಜೆ.ಡಿ.ಎಸ್.ನವಳು. ಯಾರ ಒಳ್ಳೆ ಕೆಲ್ಸ ಮಾಡ್ತಾರೋ ಅವರ ಪರವಾಗಿ ಕೆಲ್ಸ ಮಾಡ್ತಿವಿ. ನನ್ನ ಮಕ್ಕಳು ರಾಜಕೀಯ ಒಲ್ಲೆಂತಾರ. ನಾನು ಮುಂದಿನ ಸರಿ ತಾಲೂಕ ಪಂಚಾಯ್ತಿಗೆ ನಿಲ್ಲತೀನಿ. ಹೆಣ್ಣಮಕ್ಕಳಿಗೆ ಸಾಮರ್ಥ್ಯ ಐತಿ, ಮುಂದ ಬರ್ತಾರ. ಬೆಂಗಳೂರ ವಿಧಾನಸೌಧಕ್ಕ (ವಿಧಾನ ಸಭೆ) ಹೋಗಿದ್ದೆ. ಎಲ್ಲಾ ಗ್ರಾಮ ಪಂಚಾಯ್ತಿಯೋರು ಸೇರಿದ್ರು. ಎಂತೆಂಥಾ ಹೆಣಮಕ್ಕಳದಾರವ್ವ. ಅವರ ಮುಂದ ನಾವು ಏನು ಅಲ್ಲ. ನಾವು ಇಂಗ್ಲೀಷ ಕಲಿತು ಅವರಂಗ ಮಾತಾಡಬೇಕು. ರಾಜಕಾರಣದ ಹೊಸ ಜಗತ್ತು ಕಂಡಂಗಾಯ್ತು. ಸರ್ಕಾರದೊರು ಇನ್ನೂ ಒಳ್ಳೆ ಯೋಜನೆ ರೂಪಿಸಬೇಕು. ಹೆಣ್ಣಮಕ್ಕಳಿಗೆ ಹೆಚ್ಚಿನ ಅವಕಾಶ ಕೊಡ್ಬೇಕು. ಅಕ್ಷರ ತಿಳಿದೋರು ಪಂಚಾಯ್ತಿನಾಗಿದ್ರ ಚಲೋ ಆಗತೈತಿ. ಯಾಕಂದ್ರ ಗಂಡಸರು ತಪ್ಪು ಮಾಹಿತಿ ಕೊಡ್ತಾರ. ಇಗ ನನ್ಗೆ ಅನುಭವ ಆಗ್ಯೆತಿ. ನಾನ್ಯಾರ ಮಾತೂ ಕೇಳಲ್ಲ, ನ್ಯಾಯವಾಗಿ ಹೋಗ್ತಿನಿ. ಅದ್ಕ ಜನಾ ನನ್ನ ನೆನಸ್ತಾರ. 'ಸಾಕಲ್ಲ ಇಷ್ಟು'? ಅಂತ ನನ್ನ ಕೇಳಿ ಮಾತು ಮುಗಿಸಿದ್ರು.

## ಪ್ರಕರಣ: ೫

ಕುಷ್ಟಗಿ ತಾಲೂಕಿನ ಲಿಂಗನಬಂಡಿ ಗ್ರಾಮಪಂಚಾಯತಿಯ ಸದಸ್ಯಳಾಗಿರುವ ದೇವಕಮ್ಮ ಸಾಮಾನ್ಯ ಅಭ್ಯರ್ಥಿಯಾಗಿ ಆಯ್ಕೆಯಾದವರು. ಮೂರನೇಯ ಕ್ಲಾಸಿನವರೆಗೆ ಓದಿರುವರು. ಅವರ ಪತಿಯ ಹೆಸರು ಮಹಾದೇವಪ್ಪ ೨೦ ವರ್ಷಗಳಿಂದ ದಳಪತಿ ಆಗಿರುವರು. ಗ್ರಾಮದ ಜನಗ ಜೊತೆ ಸೌಹಾರ್ದಯುತ ಸಂಬಂಧವಿದೆ. ಗ್ರಾಮದ ಜನರ ಸೇವೆ ಮಾಡಲು, ಅವರ ರಾಜಕೀಯ ಮನೆತನದ

ಹಿನ್ನೆಲೆ ಕಾರಣವಾಗಿದೆ. ಗ್ರಾಮದ ಜನತೆ ಚುನಾವಣೆಗೆ ಸ್ಪರ್ಧಿಸುವಂತೆ ಸಲಹೆ ನೀಡಿದ್ದರು. ಆದಕಾರಣ ದೇವಕಮ್ಮ ಚುನಾವಣೆಯಲ್ಲಿ ಸ್ಪರ್ಧಿಸಿ ಜಯಶಾಲಿಯಾದರು. ಅವರ ಮನೆಯ ಆರ್ಥಿಕ ಸ್ಥಿತಿ ಉತ್ತಮವಾಗಿದೆ. ದೇವಕಮ್ಮ ತಮ್ಮ ಸದಸ್ಯತ್ವದ ಅಧಿಕಾರ-ಕಾರ್ಯಗಳನ್ನು ವಿವರಿಸತೊಡಗಿದರು. 'ರಾಜಕೀಯ ಕ್ಷೇತ್ರಕ್ಕೆ ನಾನು ಹೊಸಬಳಾದರೂ ನಮ್ಮ ಮನೆತನದವರು ಹಳೆಯವರು. ಗ್ರಾಮದ ಜನತೆ ನನ್ನಲ್ಲಿ ಕಷ್ಟ-ಸುಖ ಹಂಚಿಕೊತಿದ್ರು (ಬಹುಶಃ ಗಂಡ ದಳಪತಿ ಆಗಿರೋದ್ರಿಂದ) ಹಾಗಾಗಿ ಈ ಕ್ಷೇತ್ರ ನನ್ಗೆ ಹೊಸತೆನಿಸಲಿಲ್ಲ.

ಗ್ರಾಮಪಂಚಾಯತಿಯಲ್ಲಿ ಹೆಚ್ಚಿನ ಅಧಿಕಾರ ಹೊಂದಿರೊರು ಅಧ್ಯಕ್ಷರು, ನಮ್ಗೆ ಅವರಷ್ಟು ಅಧಿಕಾರವಿಲ್ಲ. ಸರ್ಕಾರ ಸದಸ್ಯರಿಗೆ ಹೆಚ್ಚಿನ ಅಧಿಕಾರ ನೀಡಬೇಕು. ತಿಂಗಳು ಅಥವಾ ೨ ತಿಂಗಳಗೊಮ್ಮೆ ಸಭೆ ಕರಿತಾರೆ. ಎಲ್ಲಾ ಸದಸ್ಯರು, ಅಧ್ಯಕ್ಷರು ಹಾಗೂ ಉಪಾಧ್ಯಕ್ಷರೂ ಸೇರ್ತಿವಿ. ಸರ್ಕಾರ ನಿಗದಿಪಡಿಸಿದ ಅಭಿವೃದ್ಧಿ ಕಾಮಗಾರಿಗಳ ಬಗ್ಗೆ ಅಲ್ಲಿ ಚರ್ಚಿಸತಾರೆ. ಸದಸ್ಯರ ಪಾತ್ರ ಅಲ್ಲಿ ಹೂಂ ಅಥವಾ ಉಹೂಂ; ಅಷ್ಟೆ. ಗ್ರಾಮದಲ್ಲಿರುವ ಜನರ ಸಮಸ್ಯೆಗಳನ್ನು ನಾವು ತಿಳಿಯುವ ಮೊದಲೇ ಗ್ರಾಮದ ಜನ ನಮ್ಮಲ್ಲಿಗೆ ಬಂದು ಸಮಸ್ಯೆ ಹೇಳ್ತಾರೆ. ಶೌಚಾಲಯ ಇಲ್ಲದ ಮನೆಗಳಿಗೆ ೫೦೦ ರೂಪಾಯಿ ಶೌಚಾಲಯ ಕಟ್ಟಿಸಿಕೊಳ್ಳಲು ಸರ್ಕಾರ ಕೊಡುತ್ತೆ. ಅವರ ಮನಿ ಪಕ್ಕಕ್ಕೆ ತೆಗ್ಗು ತೋಡಿ ಸಿಮೆಂಟ ಮಾಡಿಸಿ, ತಟ್ಟಿ ಕಟ್ಟಿ ಕೊಡಬೇಕು, ಅದರ ಮೇಲೆ ಮನೆಯವರೆ ತಗಡು ಹಾಕಿಸ್ಕೊಬೇಕು. ಇದು ಸರ್ಕಾರದ ನಿಯಮ. ಇದಕ್ಕೆ ಯಾರೂ ಒಪ್ಪಲ್ಲ, ಊರ ಹೊರಗ ಹೋಗ್ತಿವಿ, ಇದಕ್ಯಾಕ ದುಡ್ಡು ಹಾಕಬೇಕು ಅಂತಾರ. ಶೌಚಾಲಯಕ್ಕೆ ನೀಡಿದ ೫೦೦ ರೂಪಾಯಿ ಇಸ್ಕೊಂಡು ಶೌಚಾಲಯ ಕಟ್ಟಿಸಿಕೊಳ್ಳೊದಿಲ್ಲ. ಇನ್ನು ಮನಿ ಮುಂದ ಬಂಡಿ ಹಾಕಿಸೋದು. ನಮ್ಮನಿಗೆ ಹಾಕಿಸ್ರಿ, ನಿಮ್ಗೆ 'ವೋಟ್' ಹಾಕಿವಿ ಅಂತಾರ. ಯಾರಿಗಂತ ಕೊಡ್ಬೇಕು? ಜಾತಿಯಿಂದ ಹೆದರಿಸ್ತಾರ. 'ನಾವು ದಲಿತರು ನಮ್ಗ ಕೊಡೊದಿಲ್ಲೆನ್ರಿ' ಅಂತ ಕೂಗಾಡ್ತಾರ ಊರೊಳಗೆ ಜಾತಿ ಪದ್ಧತಿ ಇದೆ. ಆದ್ರ ನಮ್ಮೊಳಗ (ಸದಸ್ಯರೊಳಗೆ) ಯಾವ ಭೇದ-ಭಾವನೂ ಇಲ್ಲ. ಕಡಿಮೆ ಜಾತಿಯವರು ಮೊದ್ಲು ನಮ್ಮ ಜೊತಿ ಕೂಡಾಕ, ಮಾತಾಡೋಕ ಹಿಂಜರಿತಿದ್ರು. ಇಗ ಹಾಗಿಲ್ಲ ಬಿಡ್ರಿ. ಎಲ್ಲಾರೂ ಒಂದ ಕಡೆ ಕೂತು ಚಾ ಕುಡಿತೀವಿ. ನಮ್ಮ ಹೊಲದ ಆದಾಯ ಚೆನ್ನಾಗಿದೆ. ಮನಿಯೊಳಗ ದುಡ್ಡಿನ ವ್ಯವಹಾರ ನಾನೇ ನೊಡ್ಕೊತೀನಿ. ಈ ಸಾರಿ ಹೊಲದ ಬೆಳಿಯಿಂದ ಬಂದ ಉತ್ಪನ್ನದಲ್ಲಿ ೫೦,೦೦೦ ಮಗಳ ಮದ್ವಿಗಂತ ತೆಗಿದಿಟ್ಟಿನ್ರಿ. ಹೆಣ್ಣಮಕ್ಕಳು ದುಂದು ಖರ್ಚು ಮಾಡೋದಿಲ್ಲ. ದುಡ್ಡು ಉಳಿಸುವುದು ಗೊತ್ತಿರುತ್ತ. ಹೀಗಾಗಿ ನಮ್ಗ ಪಂಚಾಯ್ತಿ ದುಡ್ಡು ಹೆಂಗ ಖರ್ಚ ಮಾಡಬೇಕಂತ ಗೊತ್ತಾಗತೈತಿ. ಬಜೆಟ್ ವೇಳ್ಯಾಗ ಈ ರೀತಿ ಈ ಯೋಜನಾಕೆ ಖರ್ಚು ಮಾಡಿದ್ರ ಇಷ್ಟ ಉಳಿತೈತಿ ಅಂತ ಹೇಳಬಹುದು. ಮೀಟಿಂಗ್ ಇದ್ದಾಗ ೫-೬ ತಾಸು ಪಂಚಾಯ್ತಿಯೊಳಗ ಕಳಿತೀವಿ. ಇಲ್ಲದಾಗ ನಮ್ಮ ಮನಿ-ಹೊಲ ಇದ್ದ ಇರುತ್ತ. ಪಂಚಾಯ್ತಿಗೆ

ಹೆಚ್ಚಿನ ಅಧಿಕಾರ ಕೊಡ್ಬೇಕು, ಅಂದಾಗ ಭಾಳ ಸಂಖ್ಯೆನಲ್ಲಿ ಹೆಂಗಸರು ಬರ್ತಾರ. ಇಲ್ಲಿಗೆ ಬಂದಮೇಲೆ ಹೆಣ್ಣಮಕ್ಕಳು ಧೈರ್ಯ ಕಲಿತ್ರು. ನಾವೆಲ್ಲರೂ ಸೇರಿ ಊರ ಸಮಸ್ಯೆ ನಿವಾರಿಸಬೇಕು, ನಿವಾರಿಸ್ತೀವಿ. ಎಲ್ಲರಿಗೂ ಒಳ್ಳೆದ ಮಾಡಬೇಕಂತ ಬಂದೀವಿ, ಒಳ್ಳೆದನ್ನ ಮಾಡ್ತಿವಿ.

## ಪ್ರಕರಣ: ೬

ನನ್ನ ಹೆಸ್ರು ಹುಲಿಗೆಮ್ಮ, ಮನ್ನಾಪುರ ಗ್ರಾಮಪಂಚಾಯತಿ ಸದಸ್ಯಳು, ನಮ್ಮನ್ಯಾಗ ಯಾರೂ ರಾಜಕೀಯಕ್ಕ ಬಂದಿಲ್ಲ. ನಾವು ಎಸ್.ಟಿ. ವಾಲ್ಮೀಕಿಯವರು. ಜಾತಿ ಮೇಲೆ ಸೀಟ ಸಿಕ್ಕಿತು. ಚುನಾವಣೆಗೆ ನಿಂತೆ. ಹಿರಿಯರು ಮಾಡಿದ ೮ ಎಕರೆ ಹೊಲ, ಮನಿ ಅಷ್ಟರೀ ನಮ್ಮ ಆಸ್ತಿ. ಚುನಾವಣ್ಯಾಗ ನಿಂತಾಗ ಊರ ಮಂದಿ 'ಹುಲಿಗೆವ್ವ ಉಪ್ಪಿಟ್ಟು-ಚಾ ಕ್ಕಂತ ದುಡ್ಡು ಖರ್ಚ ಮಾಡದಿದ್ರ, ಬೇರೆಯವರು ಆರಿಸಿ ಬರ್ತಾರ ಅಂದ್ರು. ಅದಕ್ಕ ಮಂದಿಗೆ ಚಾ ಕುಡಿಸಿದ್ವಿ. ಮನಿಗೆ ಹೋಗಿ 'ವೋಟ್' ಹಾಕ್ರಿ ಅಂತ ಕೇಳತಿದ್ದೆ. ನನ್ನ ಮಗ ನನ್ನ ಜೊತೆಗೆ ಇರ್ತಿದ್ದ. ೫ ಜನಾ ಮಕ್ಕಳಾಗ ಹಿರೇಮಗಾ ನನ್ನ ಜೊತಿಗಿರ್ತಾನ. ಗಂಡಸರು 'ಏನ್ ಹುಲಿಗೆಮ್ಮ ಮಗನ ಮಾತು ಕೇಳ್ತಿ, ನೀನು ಸಭೆದಾಗ ಮಾತಾಡು ಅಂತಾರ. ನನ್ಗ ನಾಚಿಕೆ ಆಗತೈತ್ರಿ, ನಮ್ಮ ಮಂದಿ ಇಷ್ಟ ಮುಂದ ಬಂದಿವಲ್ಲ ಅಂತ ಹೆಮ್ಮೆನೂ ಆಗತೈತಿ. ಮೊದಲಿದ್ದ ನಾಚಿಕೆ, ಹಿಂಜರಿಕೆ ಇಗಿಲ್ಲ. ಬರ್ತ ಬರ್ತ ಧೈರ್ಯ ಬರತೈತಿ ಅಂತ ಮಗ ಹೇಳ್ತಾನ. ಯಜಮಾನ ಹೊಲ ನೋಡ್ಕೊತಾರ. ತಿಂಗಳ ಸಭೆ ಇರದಿದ್ದಾಗ ನಾನೂ ಹೊಲಕ್ಕ ಹೋಗ್ತಿನಿ.

ನಾನು ಓದಿದವಳಲ್ಲ. ನನ್ನ ಹೆಸರು ಬರಿಯಾಕೂ ನನ್ಗ ಬರ್ತಿರಲಿಲ್ಲ. ೨ ತಿಂಗಳವರೆಗೂ ಕಷ್ಟಪಟ್ಟು ನನ್ನ ಹೆಸರು ಬರಿಯೋದು ಕಲಿತೆ. ಓದಾಕಂತೂ ಬರಲ್ಲ. ಮೀಟಿಂಗದಾಗ 'ಕಾಮಗಾರಿ' ಬಗ್ಗೆ ಇರೋ ಪೇಪರ ಕೊಟ್ಟಿರ್ತಾರ, ಮಗ ಓದಿ ಹೇಳ್ತಾನ. ಹಾಗಂತ ನನ್ಗೇನೂ ಗೊತ್ತಿಲ್ಲಂತಲ್ಲ. ನಮ್ಮೂರ ಜನರ ಸಮಸ್ಯೆ ಯಾವುದು? ಯಾವುದಕ್ಕ ಹೆಚ್ಚು ಮಹತ್ವ ಕೊಡಬೇಕಂತ ಗೊತ್ತಾಗತೈತಿ. ನೀರಿನ ಸಮಸ್ಯೆ ಭಾಳ ಐತಿ. ನಾವು ಕೈ ಪಂಪಿಂದ ನೀರು ತರ್ತೀವಿ. ಮನ್ಯಾಗ ಕರೆಂಟ ಇರ್ಲಿಲ್ಲ. ಇಗೀಗ ಹಾಕಿಸೀವಿ. ಟಿ.ವಿ. ಇಲ್ಲರಿ ಸದಸ್ಯಳಾದ ಮೇಲೆ ಅಲ್ಪಸ್ವಲ್ಪ ಬದಲಾಗೀನಷ್ಟ.

ಸರ್ಕಾರದೋರು ನಮ್ಮ ಮಂದಿಗೆ ಭಾಳ ಸಹಾಯ ಮಾಡ್ಯಾರೆ. ಮೊದ್ಲು ಊರಮಂದಿ ನಮ್ಮನ್ನ ಮಾತಾಡಿಸತಿರಲಿಲ್ಲ. ಇಗ 'ಪಂಚಾಯ್ತಿ ಮೆಂಬರ ಬಂದ್ಲು' ಅಂತಾರ. ಸರ್ಕಾರದೋರು ಈ ವ್ಯವಸ್ಥೆ ಮಾಡದಿದ್ರ ಹಿಂದುಳಿದವರಾದ ನಾವು ಮುಂದ ಬರೋಕಾಗತಿತ್ತಾ? ಮನಿಮಂದಿ, ಊರಮಂದಿ ಮರ್ಯಾದಿ ಕೊಡುವಾಗ 'ಸಾರ್ಥಕಾತು ಜೀವ' ಅನಿಸ್ತದ. ಊರೊಳಗ ಬಾಂಬ್ರು, ಲಿಂಗಾಯತರು,

ರೆಡ್ಡ್ಯಾರು ಎಲ್ಲಾರೂ ನನ್ನ ಮಾತಾಡಿಸ್ತಾರ. 'ನಮ್ಮ ಕೆಲ್ಸ ಮಾಡಿ ಕೊಡು ಅಂತಾರ' ಗಂಡಸರು ಕುಡಿದು ಬಂದು ಬಯ್ಯುವಾಗ ನನ್ಗ ಬ್ಯಾಸರಾಗುತ್ತ, ಸರ್ಕಾರದ ಹತ್ರ ಭಾಳ ರುಡ್ಡ ಐತಿ, ನೀವೆಲ್ಲಾ ಕೇಳ್ರಿ. ಅಂತ ಕೂಗಾಡತಾರ. ಗಂಡ-ಮಗ ಅವರನ್ನ ಸಮಾಧಾನ ಮಾಡಿ, ಅಥವಾ ಮಾತು ಕೇಳದಿದ್ದರೆ ಚೆನ್ನಾಗಿ ಬೈಯ್ದು ಕಳಿಸ್ತಾರ.

ಆರೋಗ್ಯ ಕೇಂದ್ರ. ಸಾಲಿಗೆ ಮೇಲ್ವಿಚಾರಣೆ ಮಾಡಲು ಹೋಗ್ತಿರ್ತಿವಿ. ಸಾಲಿ ಮಕ್ಕಳಿಗೆ ಬಿಸಿ ಊಟ ಸರಿ ಕೊಡ್ತಾರಿಲ್ಲೋ? ಪೋಲಿಯೋ ಲಸಿಕಿ ಬಂದೈತಾ? ಸಾಲಿ ಮಾಸ್ತರ ಸರಿಯಾಗಿ ಪಾಠ ಹೇಳ್ತಾರಿಲ್ಲೊ ಅಂತ ನೋಡ್ತಿವಿ. ನನ್ನ ವ್ಯಾಪ್ತಿಗೆ ಬಂದ ಕೆಲ್ಸ ನಾ ಸರಿಯಾಗಿ ಮಾಡ್ಲಿನ್ರಿ. ಮೆಂಬರ ದುಡ್ಡು ತಿಂತಾರ ಅಂತ ಜನಾ ಮಾತಾಡಿದಾಗ ನೋವಾಗತೈತಿ. ನಮ್ಮ ಮಂದಿ, ಊರ ಮಂದಿ ಸುಧಾರಿಸಲಿ ಅಂತ ಮಾಡ್ತಿನಿ. ನಾನು ಸಾಲಿ ಕಲಿತಿಲ್ಲ ಆದ್ರ ನನ್ನ ಆರಿಸಿದ ಜನಕ್ಕ ನಾ ಒಳ್ಳೆದ ಮಾಡಬೇಕಂತ ಮನಸ್ಸಿನಾಗ ಅನಕೊಂಡಿನಿ. ಬಂಡಿಹಾಕಿಸೀನಿ, ಭಾಗ್ಯಜ್ಯೋತಿ ಬಂದಾಗ ಲೈಟ ಹಾಕಿಸೀನಿ. ಸಾಲಿ ಸುಧಾರಿಸೀನಿ. ನನ್ನ ಜನ್ಮಕ್ಕ ಇಷ್ಟ ಸಾಕು. ಬಜೆಟ್ ಬಗ್ಗೆ ಸಭಾದೊಳಗ ಹೇಳ್ತಾರ, ನನ್ಗ ಅರ್ಥ ಆಗೋದಿಲ್ಲ, ಇನ್ನೊಬ್ಬರನ್ನ ಕೇಳ್ತಿನಿ. ಜನಾ ನನ್ನ ಕೆಲ್ಸ ಮೆಚ್ಯಾರ ನನ್ನ ದೈವ ಚನ್ನಾಗೈತಿ. ಇಷ್ಟೆಲ್ಲಾ ಸುಧಾರಣೆ ಆಗ್ಯೆತ್ರಿ.

## ಪ್ರಕರಣ: ೭

ಲಿಂಗನಬಂಡ್ರಿ ಗ್ರಾಮಪಂಚಾಯತಿಯ ಸದಸ್ಯಳಾಗಿರುವ ಹನುಮವ್ವನವರು ಮೀಸಲು ಅಭ್ಯರ್ಥಿಯಾಗಿ, ಚುನಾವಣೆಯಲ್ಲಿ ಸ್ಪರ್ಧಿಸಿ ಆರಿಸಿ ಬಂದಿರುವರು. ಅನಕ್ಷರಸ್ಥರಾಗಿದ್ದ ಹನುಮವ್ವ ಸಹಿ ಮಾಡಲು. ಸ್ವಲ್ಪ ಮಟ್ಟಿಗೆ ಓದಲು ಕಲಿತಿರುವರು. ಹನುಮವ್ವರನ್ನು ಪ್ರಶ್ನಿಸಬೇಕೆಂದಾಗ 'ನಾಚಿಕೊಂಡ್ರು' ನಿಮ್ಮಂತ ಓದಿದೋರಿಗೆ ನಾವೇನು ಹೇಳಬೇಕ್ರಿ? ಅಂತ ಪ್ರಶ್ನಿಸಿದ್ರು. ನಿಮ್ಮ ಸದಸ್ಯತ್ವದ ಅಧಿಕಾರದ ಬಗ್ಗೆ, ನಿಮ್ಮಲ್ಲಾದ ಬದಲಾವಣೆ ಬಗ್ಗೆ, ರಾಜಕೀಯ ವಿಷಯದ ಬಗ್ಗೆ ನಿಮಗಿರೋ ಆಸಕ್ತಿ ಬಗ್ಗೆ ವಿವರಿಸಿ ಅಂದೆ. ವಯಸ್ಸು ೩೬ ರ ಮೇಲಾದರೂ ಚಿಕ್ಕವರಂತೆ ಕಾಣುತ್ತಿದ್ದ ಹನುಮವ್ವ ಕಷ್ಟ ಜೀವಿ ಎಂದು ತಿಳಿಯಿತು. ಅವರು ತಮ್ಮ ಬಗ್ಗೆ ಹೇಳಿದ್ದು :

ನಮ್ಮಾವ ಗ್ರಾಮ ಪಂಚಾಯತಿ ಅಧ್ಯಕ್ಷರಾಗಿದ್ರು. ಅವರಿಗೆ ೪೦ ವರ್ಷಗಳಿಂದ ರಾಜಕೀಯ ನಂಟಿತ್ತು. ಅವರ ನಂತರ ನಮ್ಮೆಜಮಾನ್ರು ಪಂಚಾಯ್ತಿ ಸದಸ್ಯರಾದ್ರು. ಆಗೆಲ್ಲಾ ಮನಿಗೆ ಬಂದು-ಹೋಗೋರ ಯೋಗಕ್ಷೇಮ ವಿಚಾರಿಸ್ತಿದ್ದೆ. ಅವರನ್ನ ನೋಡಿ ನನ್ಗೂ ರಾಜಕೀಯಕ್ಕ ಬರಬೇಕಂತ ಆಸೆ

ಆಗತಿತ್ತು. 'ಹೆಂಗಸರಿಗಲ್ಲ ಬಿಡು ರಾಜಕೀಯ' ಅಂತ ಎಲ್ಲಾರು ಅನ್ನೋರು. ನಮ್ಮೆಜಮಾನ್ರು ನನ್ನ ಆಸೆ ನೋಡಿ ನಿಲ್ತಿ ಏನು? ಅಂತ ಕೇಳಿದ್ರು. ನಮ್ಮ ಜಾತಿಯೋರಗಂತ ಸೀಟಕೊಟ್ರು, ಆರಿಸಿಬಂದೆ. ಎಲೆಕ್ಷನದಾಗ ದುಡ್ಡು ಖರ್ಚಾತು. ನಮ್ಮ ಎದುರಿಗೆ ನಿಂತೋರು ಖರ್ಚು ಮಾಡಬೇಕಾದ್ರ, ನಾವು ಸುಮ್ಮನಿರಬಾರದಂತ ಯಜಮಾನ್ರು ಓಡಾಡಿದ್ರು. ನಾನು 'ವೋಟ್' ಕೇಳೋಕೆ ಹೋಗಿದ್ದೆ.

ನಮ್ಮದು ಸ್ವಂತಮನಿ, ಹೊಲ ಇದೆ. ಹಾಗಂತ ಶ್ರೀಮಂತರಲ್ಲ ಮಧ್ಯಮ ವರ್ಗದವರು. ಮನೆಯಲ್ಲಿ ಹಣಕಾಸಿನ ವ್ಯವಹಾರ ಯಜಮಾನ್ರೆ ನೋಡ್ಕೊತಾರೆ. ಇಂತಿಂಥದಕ್ಕೆ ದುಡ್ಡು ಬೇಕು ಅಂದ್ರ ಕೊಡ್ತಾರೆ. ಮನಿಯೊಳಗ ಏನ ವಿಷ್ಯ ಇರ್ಲಿ ನನ್ನೂ ಒಂದ ಮಾತು ಕೇಳ್ತಾರ. ನನ್ಗ ತಿಳಿಯದಿದ್ದಾಗ ನಾನೂ ಪ್ರಶ್ನೆ ಮಾಡ್ತಿದ್ದೆ ಹಾಗಾಗಿ ಪಂಚಾಯ್ತಿಯೊಳಗ ನನಗೆ ಹೆದರಿಕೆ ಆಗಲಿಲ್ಲ. ಎಲ್ಲಾ ನೋಡಿದ ಮಂದಿನೆ. ರಾಜಕೀಯದಾಗ ನಾನು ಬಂದಾಗ ನನ್ನ ಮಕ್ಕಳು ಭಾಳ ಸಂತಸಪಟ್ಟರು. ಊರಮಂದಿ 'ಒಳ್ಳೆಕಿದಿ, ಜೋರಿದಿ, ನಿನ್ನ ಮಾತು ನಡಿತೈತಿ, ನಮ್ಮ ಕೆಲ್ಸ ಮಾಡ್ಸಿಕೊಡು ಅಂತಾರ. ಕೆಲವೊಬ್ರು ಜಾತಿ ಹೀಯಾಳಿಸಿ ಬಯ್ತಾರ.

ಎಲ್ಲಾ ವೇಳೆದಾಗೂ, ಎಲ್ಲಾ ಚೊಲೋಯಿರಲ್ಲ. ನೀರಿನ ಸಮಸ್ಯೆ, ಬೀದಿ ದೀಪದ ಸಮಸ್ಯೆ, ಒಳ ಚರಂಡಿ ಸಮಸ್ಯೆ, ಬಂಡಿ ಸಮಸ್ಯೆ, ಹೂಳೆತ್ತೊ ಸಮಸ್ಯೆ ಅಂತ ಮಂದಿ ಬರ್ತಿರತಾರ. ಅವರ ಸಮಸ್ಯೆ ಬಗೆಹರಿಸಬೇಕಂದ್ರ ಮೀಟಿಂಗನೊಳಗ ಜಗಳಾಡಬೇಕು. ಇಗೀನ ಬಜೆಟನಲ್ಲಿ ಆಗದಿದ್ರ ಮುಂದೆ ಮಾಡಿವಿ ಅಂತ ಹೇಳಬೇಕಾಗತೈತಿ. ನನ್ನ ಬಗ್ಗೆ ಜನರಲ್ಲಿ ಗೌರವ ಇದೆ, ಹಾಗಾಗಿ ಧೀರ್ಘಕ್ಕೆ ಹೋಗಿಲ್ಲ ನೋಡ್ರಿ. ಸಾವು ಕೆಲ್ಸ ಮಾಡೋದು ನಮ್ಮೂರ ಜನರಿಗಾಗಿ.

ತಿಂಗಳಿಗೊಮ್ಮೆ, ಒಮ್ಮೊಮ್ಮೆ ೨ ತಿಂಗಳಿಗೊಮ್ಮೆ ಸಭೆ ಕರಿತಾರ, ಅಲ್ಲಿ ಯೋಜನೆಗಳ ಬಗೆಗಿರುವ ವಿವರವನ್ನೊಳಗೊಂಡ ಪೇಪರ ಕೊಡ್ತಾರ. ನನ್ಗ ಓದಾಕ ಬರಲ್ಲ, ತಿಳಿದೋರನ್ನ ಕೇಳ್ತಿನಿ, ಇಲ್ಲ ಮನಿಗೆ ತಂದು ಮಗನಿಗೆ ತೋರಿಸ್ತಿನಿ. ಲೆಕ್ಕ-ಪತ್ರ ನನ್ನ ಪರವಾಗಿ ನನ್ನ ಮಗ ಕೇಳ್ತಾನ. ಲೆಕ್ಕದಲ್ಲಿ ತಪ್ಪಾದ್ರ ನನ್ಗ ಗೊತ್ತಾಗೋದಿಲ್ಲಂತ ಮಗ ಹೇಳ್ತಾನ. ಎಲ್ಲಾ ಸದಸ್ಯರಿಗೆ ಒಂದೊಂದ ಕಾಮಗಾರಿ ಕೆಲ್ಸ ಕೊಟ್ಟಿರ್ತಾರ. ಪಂಚಾಯ್ತಿಯೊಳಗೆ ಯಾವುದೇ ವಿಷ್ಯ ನಿರ್ಣಯಕ್ಕೆ ಬರಬೇಕಾದ್ರ ನಮ್ಮಾತು ಗಂಡಸರು ಕೇಳ್ತಾರೆ. ೧೮ ಜನ ಸದಸ್ಯರಲ್ಲಿ ೮ ಮಂದಿ ಹೆಣ್ಣಮಕ್ಕಳ ಅದೀವಿ. ನಮ್ಮ ಒಪ್ಪಿಗೆ ಬಹುಮತಕ್ಕೆ ಸಾಕು. ಬಜೆಟ ತಯಾರಿಸುವಾಗ 'ಹೊಂಡಾ ಕಟ್ಟಿಸಬೇಕಂತ ನಾವು ಹೇಳಿದ್ವಿ, ಬಾಲ್ಯ ವಿವಾಹ ವಿರೋಧಿಸಿದ್ವಿ, ಸಾರಾಯಿ ಮಾರಾಟ ಬೇಡಂದ್ವಿ. ನಮ್ಮ ಮಾತು ಎಲ್ಲಾ ಕಡೆಗೂ ನಡಿಯುತ್ತಂತಲ್ಲ, ಕೆಟ್ಟದ್ದು ಬೇಡ ಅಂತಿವಿ. ಕುಡಿಯೋದ್ರಿಂದ ಮನಿ ಮಠ ಹಾಳಾಗತೈತಿ. ಸರ್ಕಾರದೋರು ವಿಚಾರವಂತರಾದ್ರ ಸರಾಯಿ ಮಾರಾಟ

ಬೇಡ ಅಂತಾರ. ಮೀಟಿಂಗ ಇಲ್ಲದಾಗ ಮನಿಯೊಳಗಿನ ಕೆಲ್ಸ ಇದ್ದ ಇರುತ್ತ. ಸಂಜಿವ್ಯಾಳ್ಯಾಗ ಊರ ಮಂದಿ ಮಾತಾಡಿಸಿ ಬರ್ತಿನಿ. 'ಮನಿಗೆದ್ದು ಮಾರಗೆಲ್ಲಬೇಕಂತ'. ನಮ್ಮೂರ ಗೆದ್ದು, ಆಮೇಲೆ ಬೇರೆ ಊರ ನೋಡಿದ್ರಾಯ್ತು.

ಹೆಣ್ಣಮಕ್ಕಳಿಗೆ ಮರ್ಯಾದಿ ಕೊಡ್ತಾರ. ನಮ್ಮನ್ನ ನೋಡಿ ಊರ ಮಂದಿ 'ಏನ ನಸೀಬವ ನಿಂದು' ಅಂತಾರ. ಆವಾಗ ಭಾಳ ಸಂತೋಷಾಗುತ್ತರಿ. ಬ್ಯಾರೆ ಊರೊಳಗೂ ನಮ್ಗ ಸನ್ಮಾನ ಮಾಡ್ತಾರ. ನನಗಾಗ 'ಜನ್ಮ ಸಾರ್ಥಕಾತು' ಅನಸ್ತದ. ನನ್ನ ಮಕ್ಕಳಿಗೆ ರಾಜಕೀಯದಾಗ ಬರಾಕ ಇಷ್ಟಯಿಲ್ಲ. ಭಾಳ ಓದಬೇಕಂತ. ನಿಮ್ಮನ್ನ ನೋಡಿದಾಗ 'ನನ್ನ ಮಕ್ಕಳನ್ನು ನಿಮ್ಮಂಗ ಮಾಡಬೇಕು ಅನಿಸ್ತು. ನಿಮ್ಮಂಗ ವಿದ್ಯಾವಂತರಾಗತಾರಲ್ಲವ ನನ್ನ ಮಕ್ಕಳು? ಅಂತ ನನ್ನನ್ನೆ ಪ್ರಶ್ನಿಸಿ ಹನುಮವ್ವ ಮಾತು ಮುಗಿಸಿದ್ರು.

## ಪ್ರಕರಣ: ೮

ಯಲಬುರ್ಗಾ ತಾಲೂಕಿನ ಹಿರೇಮನ್ನಾಪುರ ಗ್ರಾಮಪಂಚಾಯತಿಯಲ್ಲಿ ಸದಸ್ಯೆಯಾಗಿ ಕಾರ್ಯ ನಿರ್ವಹಿಸುತ್ತಿರುವ ವಿಜಯಲಕ್ಷ್ಮೀ ವೀರೇಶ ಹಾಸಗಲ್ ಶಿಕ್ಷಿತರು. ೮ ನೇ ವರ್ಗದವರೆಗೆ ಓದಿರುವ ವಿಜಯಲಕ್ಷ್ಮಿ ಪಂಚಮಸಾಲಿಯವರಾಗಿದ್ದು, ಸಾಮಾನ್ಯ ಅಭ್ಯರ್ಥಿಯಾಗಿ ಆಯ್ಕೆಯಾದವರು. ಇವರ ರಾಜಕೀಯ ಪ್ರವೇಶಕ್ಕೆ ಪ್ರೇರಣೆ ಮಾವ ಹಾಗೂ ಯಜಮಾನರು. ಇವರ ಮನೆತನದಲ್ಲಿ ರಾಜಕೀಯ ರಂಗ ಪ್ರವೇಶಿಸಿದ ಪ್ರಥಮ ಮಹಿಳೆ. ಸದಾ ಜನಸೇವಾ ಮನೋಭಾವ ಹೊಂದಿದ್ದ ಮಾವನವರು ತೀರಿದ ನಂತರ, ರಾಜಕೀಯ ಕ್ಷೇತ್ರದ ಆಯ್ಕೆ ಮಾಡಿಕೊಂಡೆ ಎಂದ ವಿಜಯಲಕ್ಷ್ಮಿಯವರು ಕಾರಣವನ್ನು ಹೇಳಿದರು. 'ಮಾವನ ನಂತರ ಯನಮಾನ್ರು ಚುನಾವಣೆ ಸ್ಪರ್ಧಿಸಿದ್ರು. ಆದ್ರೆ ಸೋತರು. ಹೀಗಾಗಿ ಚುನಾವಣೆಗೆ ಸ್ಪರ್ಧಿಸಲು ನನ್ಗೆ ಒತ್ತಾಯಿಸಿದ್ರು. ನನಗೂ ರಾಜಕೀಯ ರಂಗದ ಬಗ್ಗೆ ಆಸಕ್ತಿ ಇತ್ತು. ನಮ್ಮ ಊರಲ್ಲಿ ಹೆಣ್ಣಮಕ್ಕಳು ವಿವಿಧ ಕ್ಷೇತ್ರದಲ್ಲಿ ಮುಂದುವರೆದಿರುವರು. ನಾನು ಹೆಚ್ಚಿಗೆ ಓದಿಲ್ಲ. ಆದ್ರೆ ಓದೋಕೆ, ಬರಿಯೋಕೆ ಬರುತ್ತೆ. ಇತ್ತೀಚಿನ ರಾಜಕಾರಣದಲ್ಲಿನ ಅವ್ಯವಸ್ಥೆ ನನ್ನನ್ನು ರಾಜಕೀಯ ಪ್ರವೇಶಕ್ಕೆ ಯೋಚಿಸುವ ಹಾಗೆ ಮಾಡ್ತು. ನನ್ನ ಕೈಲಾದ ಪ್ರಯತ್ನ ಮಾಡಿ, ನಮ್ಮೂರ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಬಹುದೆಂದು ನಿರ್ಧರಿಸಿದೆ. ಎಂದು ಧೀರ್ಘವಾಗಿ ಹೇಳಿದರು.

ಇತ್ತೀಚಿಗೆ ಗ್ರಾಮಪಂಚಾಯ್ತಿಯಲ್ಲಿನ ಮೀಸಲು ಕ್ಷೇತ್ರದ ಮಹಿಳೆಯರು ಸಾಧಿಸುತ್ತಿರುವ ಪ್ರಗತಿ ಬಗ್ಗೆ ಹೆಮ್ಮೆಯಿಂದ ಹೇಳಕೊಂಡರು. 'ಕೇರಳ ಮಾದರಿ ಯೋಜನೆ ಕರ್ನಾಟಕದಲ್ಲಿ ಬಂದಿದೆ.

ಕರ್ನಾಟಕ ಸರ್ಕಾರ ಹಲವಾರು ಯೋಜನೆಗಳನ್ನು ರೂಪಿಸಿದೆ. ಯೋಜನೆಗಳ ಬಗ್ಗೆ ಸರಿಯಾದ ಮಾಹಿತಿ ನೀಡುವವರಿಲ್ಲ. ನಮ್ಗೆ ತಿಳಿದದ್ದು ಆಶ್ರಯ ಮನೆ ಯೋಜನೆ, ಬಂಡಿ ಜೋಡಿಸೋದು, ಭಾಗ್ಯಜ್ಯೋತಿ, ಚರಂಡಿ ವ್ಯವಸ್ಥೆ, ಸರ್ಕಾರಿ ಶಾಲೆಗಳ ಮೇಲ್ವಿಚಾರಣೆ, ವಿಧವೆಯರಿಗೆ ಮಾಸಾಶನ, ಬಡ ಮಕ್ಕಳಿಗೆ ಪುಸ್ತಕ ವಿತರಣೆ, ಬಡಮಕ್ಕಳ ಪ್ರವಾಸಕ್ಕಾಗಿರುವ ಯೋಜನೆ, ಅಂಗನವಾಡಿ, ಆರೋಗ್ಯ ಮಾಹಿತಿ ಕೇಂದ್ರಗಳ ಮೇಲ್ವಿಚಾರಣೆ, ಇವುಗಳ ಬಗ್ಗೆ ಮಾತ್ರ ಗೊತ್ತು. ಸರ್ಕಾರದ ಹೊಸ ಯೋಜನೆಗಳನ್ನು ಯಾರೂ ವಿವರಿಸೋದಿಲ್ಲ. ಹೀಗಾಗಿ ಎಷ್ಟೋ ಕಾಮಗಾರಿ ಯೋಜನೆಗಳು ಕಾರ್ಯರೂಪಕ್ಕೆ ಬರುವುದಿಲ್ಲ.

ಸರ್ಕಾರದಿಂದ ಬಂದ ಅನುದಾನಗಳ ಮೊತ್ತ ತಿಳಿಸುವ ಕೆಲ್ಸ ಕಾರ್ಯದರ್ಶಿಯವರದು. ನಾವು ಹೆಂಗಸರು, ಜೋರ ಮಾಡಿದ್ರ ಮಾತ್ರ ಎಲ್ಲಾ ಹೇಳ್ತಾರ, ಇಲ್ಲಂದ್ರ ಆ ಯೋಜನೆಗಳು ಕಾರ್ಯರೂಪಕ್ಕೆ ಬರೋದಿಲ್ಲ. ಬಜೆಟ್ ತಯಾರಿಸುವಾಗ ನಮ್ಮ ಕ್ಷೇತ್ರದ ಜನರ ಸಮಸ್ಯೆಗಳನ್ನು ಪರಿಹರಿಸುವ ಬಗ್ಗೆ ಯೋಜನೆ ಸಿದ್ದಪಡಿಸಲು ಹೇಳ್ತಿವಿ. ಆಗ ಸರ್ಕಾರದೊಳಗ ದುಡ್ಡಿಲ್ಲ ಅಂತಾರೆ. ಕಾಮಗಾರಿ ವಿತರಣೆ ಮಾಡಬೇಕಾದ್ರ ಜಗಳ ಆಗುತ್ತೆ. ಫಲಾನುಭವಿಗಳ ಲಿಸ್ಟ್ ತಯಾರಿಸಿ ಅಧ್ಯಕ್ಷರು ಕಾಮಗಾರಿ ಯೋಜನೆ ವಿತರಣೆ ಮಾಡ್ತಾರೆ. ಕಾಮಗಾರಿಗಳ ಕೆಲ್ಸದಲ್ಲಿ ಸ್ವಲ್ಪ ದುಡ್ಡು ಉಳಿಯುತ್ತೆ ಅದೊಂದೆ ಲಾಭ ನಮ್ಗೆ, ಎಂದಾಗ 'ಎಷ್ಟು ಲಾಭ ಬರುತ್ತೆ? ಯಾವರೀತಿ ಬರುತ್ತೆ ಅಂತ ನಾನು ಪ್ರಶ್ನಿಸಿದಾಗ, 'ಬೇರೆ ವಿಷ್ಯ ಕೇಳ್ರಿ' ಅಂದ್ರು.

ಪ್ರತಿ ಗ್ರಾಮ ಪಂಚಾಯತಿಯೊಳಗೆ ಹೆಣ್ಣಮಕ್ಕಳು (ಮಹಿಳೆಯರು) ಸುಧಾರಿಸಿದ್ದಾರೆ. ಅವರಿಗೆ ತಮ್ಮ ಅಧಿಕಾರ, ಹಕ್ಕುಗಳ ಬಗ್ಗೆ ಜ್ಞಾನ ಇದೆ. ತಿಂಗಳ ಸಭೆ ಇರದಿದ್ದಾಗ ನಾನು ಕಿರಾಣಿ ಅಂಗಡಿ (ನಮ್ಮದೆ) ಯೊಳಗೆ ಕೂಡುವೆ. ಮನಿಯೊಳಗೆ ಅಡಿಗೆ ಮಾಡಿಟ್ಟು ಹೋದ್ರೆ ಸಾಯಂಕಾಲ ಮನಿಗೆ ಬರ್ತಿನಿ. ನನಗೇನು ಈ ಜವಾಬ್ಧಾರಿ ಭಾರ ಅನಿಸಿಲ್ಲ, ಇನ್ನೂ ಖುಷಿ ಆಗುತ್ತೆ. ಪುರುಷರಿಗೆ ಸಮನಾಗೆ ಕೆಲಸ ಮಾಡ್ತೀವಿ ಅಂದಾಗ ನಮ್ಗೂ ಅಷ್ಟೆ ಬೆಲೆ ಸಿಗಬೇಕು. ಪಂಚಾಯ್ತಿಯೊಳಗೆ ನಮ್ಮ ಮಾತು ಕೇಳ್ತಾರೆ. ಆದ್ರೆ ಸರ್ಕಾರಿ ಅಧಿಕಾರಿಗಳು ಬಂದಾಗ ನಮ್ಮನ್ನ ಕೇಳದೇ ಬರೀ ಗಂಡಸರನ್ನ ಕೇಳ್ತಾರೆ. ನಮ್ಮೂರ ಉಪಾಧ್ಯಕ್ಷರು ಅನುಭವಿಕರು, ಅಧ್ಯಕ್ಷರಿಗೆ (ಪುರುಷ) ಎಲ್ಲಾ ಹೇಳಿಕೊಡ್ತಾರ, ಅಂದ್ರೂ ಅವರನ್ನ ನಿರ್ಲಕ್ಷಿಸ್ತಾರೆ. ಇಂಥಹ ಪದ್ಧತಿ ಬದಲಾಗಬೇಕು. ಮೊದಲನಿಕಿಂತ ಇಗೀನ ಹೆಣ್ಣಮಕ್ಕಳಿಗೆ ಹೆಚ್ಚಿನ ಸ್ವಾತಂತ್ರ, ಅಧಿಕಾರ, ಮರ್ಯಾದೆಯಿದೆ. ಬರಬರತಾ ಇನ್ನೂ ಹೆಚ್ಚಾಗಬೇಕು ಅನ್ನೋದೇ ನನ್ನಾಸೆ. ನಮ್ಮ ಪಂಚಾಯತಿಯಲ್ಲಿರುವ ಅನಕ್ಷರಸ್ಥರಿಗೆ ನಾವು ತಿಳಿದುಕೊಂಡಿದ್ದನ್ನ ಹೇಳ್ತಿವಿ. ನಾವೆಲ್ಲಾ ಹೆಂಗಸರು ಒಂದೇ ಆಗಿರ್ತೀವಿ.

ಮನೆಯಲ್ಲಿ ಎಲ್ಲರೂ ಸಹಕಾರ ಕೊಡ್ತಾರೆ. ತಿಂಗಳಿಗೊಮ್ಮೆ ಸಭೆ ಕರೆದಾಗ ಸಭೆಗೆ ಹಾಜರಾಗ್ತೀವಿ. ಉಳಿದ ಸಮಯದಲ್ಲಿ ಸಮಸ್ಯೆ ಇರುವವರು ಮನಿಗೆ ಬಂದು ತಮ್ಮ ಸಮಸ್ಯೆಗಳನ್ನು ಹೇಳಿಕೊಳ್ತಾರೆ. ಬೇಗ ಬಗೆಹರಿಸ್ರಿ ಅಂತಾರೆ. ಸದಸ್ಯರಿಗೆ ಇನ್ನೂ ಹೆಚ್ಚಿನ ಅಧಿಕಾರ ಕೊಡ್ಬೇಕು ನಮ್ಮ ಸಮಸ್ಯೆಗಳನ್ನು ಮುಖ್ಯಮಂತ್ರಿಯವರ ಹತ್ರ ಹೇಳಿಕೊಳ್ಳೋಣಂತ ಮಾಡಿದ್ವಿ. ಮುಖ್ಯಮಂತ್ರಿ ಕುಮಾರಸ್ವಾಮಿಯವರರೊಂದಿಗೆ ನೇರಪ್ರಸಾರ ಕಾರ್ಯಕ್ರಮಯಿತ್ತು (ಟಿ.ವಿ.ಯೊಳಗೆ) ಆದ್ರೆ ಅವತ್ತು ಲೈನ ಸಿಗಲಿಲ್ಲ. ಭಾಳ ನಿರಾಶೆಯಾಯ್ತು. ಇಂದಿರಾಗಾಂಧಿ ಮತ್ತು ಸುಷ್ಮಾ ಸ್ವರಾಜ ಇಬ್ಬರೂ ನನ್ನ ಸ್ಫೂರ್ತಿ. ಅವರಷ್ಟು ಜನಸೇವೆ ಮಾಡೋಕಾಗದಿದ್ರೂ, ನನ್ನ ಕೈಲಾದಷ್ಟು ಮಾಡ್ತೀನಿ. ನಮ್ಮೂರ ಜನಾ ನಮ್ಮನ್ನ ಹೊಗಳ್ತಾರೆ. ಹಾಗೆಯೇ ಕೆಲವೊಬ್ಬರು ಬಯ್ಯತಾರೆ. ಇವೆಲ್ಲಾ ಇದ್ದಿದ್ದೆ.

ಸರ್ಕಾರ ಹೆಣ್ಣುಮಕ್ಕಳಿಗೆ ರಾಜಕೀಯ ಪ್ರವೇಶಕ್ಕೆ ಅವಕಾಶ ಕೊಟ್ಟಿದೆ, ಆದ್ರ ಸಂಪೂರ್ಣ ಅಧಿಕಾರ ಕೊಟ್ಟಿಲ್ಲ. ಇನ್ನೂ ಹೆಚ್ಚಿನ ಅಧಿಕಾರ ಸದಸ್ಯರಿಗೆ, ಅಧ್ಯಕ್ಷರಿಗೆ ಸಿಗಲಿ ಎಂದು ಹಾರೈಸಿದರು.

ಈವರೆಗಿನ ಅಧ್ಯಯನವನ್ನು ಅನುಲಕ್ಷಿಸಲಾಗಿ, ಅಧಿಕಾರ ಕೇಂದ್ರಗಳಾದ ರಾಷ್ಟ್ರದ ಲೋಕಸಭೆ, ರಾಜ್ಯಸಭೆ, ರಾಜ್ಯದ ವಿಧಾನಸಭೆ, ವಿಧಾನಪರಿಷತ್‌ಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಬೇಕಾದ ಅಗತ್ಯತೆಯಿದೆ ಎಂಬುವುದಂತೂ ಸ್ಪಷ್ಟ. ೧೯೮೦ ರ ದಶಕದ ನಂತರ ಮಹಿಳಾ ಮೀಸಲಾತಿಯು ಅಧಿಕ ಪ್ರಾಮುಖ್ಯತೆ ಪಡೆದಿದೆ. ಈ ಕುರಿತು ಪಾಶ್ಚಿಮಾತ್ಯ ಮಹಿಳಾವಾದಿಗಳು 'ಮೀಸಲಾತಿ' ಮೂಲಕ ಮಹಿಳಾ ಸಬಲೀಕರಣ ಸಾಧ್ಯವಾಗಬೇಕಾದರೆ, ಮಹಿಳಾ ಮೀಸಲಾತಿಯನ್ನು ಸಮರ್ಥವಾಗಿ ಬಳಸಿಕೊಳ್ಳುವಷ್ಟು ಸಾಮರ್ಥ್ಯವನ್ನು ಮಹಿಳೆಯರಲ್ಲಿ ಬೆಳೆಸುವಂತಹ ಸನ್ನಿವೇಶ ನಿರ್ಮಾಣವಾಗಬೇಕು. ಆಗ ಮಾತ್ರ ಮಹಿಳೆಯರ ರಾಜಕೀಯ ಸಬಲೀಕರಣ ಪ್ರಕ್ರಿಯೆ ಅರ್ಥಪೂರ್ಣಗೊಳ್ಳಲು ಸಾಧ್ಯ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಇದನ್ನು ನಿರಾಕರಿಸುವ ಭಾರತದ ಮಹಿಳಾ ವಾದಿಗಳು ಮಹಿಳೆಯರಿಗೆ ರಾಜಕೀಯ ಮೀಸಲಾತಿಯನ್ನು ನೀಡುವ ಮೂಲಕ ಮಹಿಳಾ ಸಬಲೀಕರಣ ಸಾಧ್ಯ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇದೇ ಅಭಿಪ್ರಾಯವನ್ನು ಭಾರತೀಯ ಮಹಿಳೆಯರ ಸ್ಥಾನಮಾನ ಅಧ್ಯಯನ ಮಾಡಿದ ಸಮಿತಿ, 'ಸಮಾಜದಲ್ಲಿನ ಮಹಿಳೆಯರ ಸ್ಥಾನಮಾನ ಕೆಳಮಟ್ಟದಲ್ಲಿರಲು, ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯ ಸಹಭಾಗಿತ್ವದ ಕೊರತೆಯೇ ಕಾರಣವಾಗಿದೆ' ಎಂದು ಅಭಿಪ್ರಾಯ ಪಟ್ಟಿದೆ. ಈ ಎರಡೂ ಅಭಿಪ್ರಾಯಗಳನ್ನು ಗಮನಿಸಿದ ಪ್ರಸ್ತುತ ಅಧ್ಯಯನವು ಭಾರತೀಯ ಮಹಿಳಾವಾದಿಗಳ ವಾದವಾದ 'ರಾಜಕೀಯ ಸಬಲೀಕರಣದಿಂದ ಮಹಿಳಾ ಸಬಲೀಕರಣ' ಎಂಬ ನಿಲುವನ್ನು ಒಪ್ಪುತ್ತದೆ ಹಾಗೂ ಪುಷ್ಠೀಕರಿಸುತ್ತದೆ.

ಅಧಿಕಾರ ವಿಕೇಂದ್ರಿಕರಣದ ಕೊನೆಯ ಹಂತ ಸ್ಥಳೀಯ ಸರ್ಕಾರಗಳಾಗಿವೆ. ಈ ಹಂತದಲ್ಲಿ ಮಹಿಳಾ ಮೀಸಲಾತಿ ಜಾರಿಯಲ್ಲಿದ್ದು, ಈ ಅವಕಾಶದಿಂದ ಆಯ್ಕೆಗೊಂಡ ಮಹಿಳೆಯರನ್ನು ಅವಲೋಕಿಸಿದಾಗ, ಅವರು ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿದ್ದಾರೆ ಎಂಬುದು ತಿಳಿದುಬರುತ್ತದೆ. ಅವುಗಳೆಂದರೆ : –

❖ ಸಾಮಾಜಿಕ ಅಭಿವೃದ್ಧಿ ಕಾರ್ಯಗಳು : ಭಾಗ್ಯಜ್ಯೋತಿ ಮತ್ತು ಸಾರ್ವಜನಿಕ ದೀಪದ ವ್ಯವಸ್ಥೆ, ಆಶ್ರಯ ಮನೆ ನಿರ್ಮಾಣ, ರಸ್ತೆ ಸ್ವಚ್ಛತೆ, ನೀರಿನ ಟ್ಯಾಂಕ್ ಕಟ್ಟಿಸುವುದು.

❖ ಆರ್ಥಿಕ ಅಭಿವೃದ್ಧಿ ಕಾರ್ಯಗಳು : ಬಡಹೆಣ್ಣು ಮಕ್ಕಳಿಗೆ ಉಚಿತ ಹೊಲಿಗೆ ಯಂತ್ರ ವಿತರಣೆ, ವಿಧವೆಯರಿಗೆ, ವೃದ್ಧರಿಗೆ ಮತ್ತು ಅಂಗವಿಕಲರಿಗೆ ಮಾಸಾಶನ ಕೊಡಿಸುವುದು, ವಿದ್ಯಾವಂತ ನಿರುದ್ಯೋಗಿಗಳಿಗೆ ಸಾಲ ಸೌಲಭ್ಯ ಕೊಡಿಸುವುದು. ಗುಡಿ ಕೈಗಾರಿಕೆ ಸೌಲಭ್ಯ, ನಿರೊದ್ಯೋಗಿಗಳಿಗೆ ಉದ್ಯೋಗ ಖಾತ್ರಿ ಯೋಜನೆಯಡಿ ಉದ್ಯೋಗ ಒದಗಿಸುವುದು.

❖ ಶೈಕ್ಷಣಿಕ ಅಭಿವೃದ್ಧಿ ಕಾರ್ಯಗಳು : ಬಡಮಕ್ಕಳಿಗೆ ಪುಸ್ತಕ ವಿತರಣೆ ಮತ್ತು ಪ್ರವಾಸ ಭತ್ಯೆ, ವಾರ್ಷಿಕ ವೇತನ, ಪುಸ್ತಕ ವಿತರಣೆ ಮತ್ತು ಕಟ್ಟಡಗಳ ಒದಗಿಸುವಿಕೆ, ಮುಂದುವರಿಕೆಯ ಶಿಕ್ಷಣ ಕೇಂದ್ರಗಳ ಮೇಲುಸ್ತುವಾರಿ ನೋಡಿಕೊಳ್ಳುವುದು ಶಾಲಾ ಮಕ್ಕಳಿಗೆ ಬಿಸಿಊಟ ವಿತರಣೆಯ ಮೇಲ್ವಿಚಾರಣೆ ಮಾಡುವುದು.

❖ ಆರೋಗ್ಯ ಕಾರ್ಯಗಳು : ಆರೋಗ್ಯ ಕೇಂದ್ರ ಮತ್ತು ಅಂಗನವಾಡಿಗಳ ಮೇಲ್ವಿಚಾರಣೆ, ಬಾಣಂತಿಯರಿಗೆ ಲಸಿಕೆ ಯೋಜನೆ, ಪೌಷ್ಠಿಕ ಆಹಾರ ಪದಾರ್ಥಗಳ ವಿತರಣೆ ಸಾಂಕ್ರಾಮಿಕ ರೋಗಗಳ ನಿಯಂತ್ರಣ ಹಾಗೂ ಏಡ್ಸ್ ಬಗೆಗೆ ಜಾಗೃತ ಮೂಡಿಸುವುದು.

ಈ ಕಾರ್ಯಗಳಿಂದ ಮಹಿಳೆಯರಿಗೆ ಆಡಳಿತ ನಡೆಸುವವೆಂಬ ಆತ್ಮವಿಶ್ವಾಸ ಮೂಡಿದೆ. ಅಷ್ಟೇ ಅಲ್ಲದೇ ಅವರ ವ್ಯಕ್ತಿತ್ವದಲ್ಲಿ ಅನೇಕ ಬದಲಾವಣೆಗಳಾಗಿವೆ. ಅಂದರೆ ಗ್ರಾಮ ಪಂಚಾಯಿತಿಗೆ ಆಯ್ಕೆಯಾದ ಪ್ರಾರಂಭದಲ್ಲಿ, ಮಹಿಳೆಯರು, ಇತರ ಪುರುಷರು, ಸದಸ್ಯರು ಮತ್ತು ಕಾರ್ಯದರ್ಶಿಗಳ ಜೊತೆಗೆ ಮಾತನಾಡಲು ಹಿಂಜರಿಯುತ್ತಿದ್ದರು. ಆದರೀಗ ಸಭೆಯಲ್ಲಿ ಚರ್ಚಿಸಲು ಮುಜುಗರ, ಹಿಂಜರಿಕೆ, ಭಯ ಇಲ್ಲವಾಗಿದೆ. ಒಟ್ಟಿನಲ್ಲಿ ಆತ್ಮವಿಶ್ವಾಸ ಮೂಡಿದೆ. ಅಷ್ಟೇ ಅಲ್ಲ, ಅವರು ಅನೇಕ ಇಕ್ಕಟ್ಟಿನ ನಡುವೆ ಮಾಡಿದ ಅಭಿವೃದ್ಧಿ ಕಾರ್ಯಗಳನ್ನು ಅವರ ಸಾಧನೆಗಳೆಂದು ಪರಿಗಣಿಸಬಹುದು.

ಈ ಮಹಿಳೆಯರು ಜನಪರ, ಹೆಚ್ಚಿನ ಸಾಮಾಜಿಕ ಅಭಿವೃದ್ಧಿ ಕಾರ್ಯಗಳನ್ನು ಮಾಡಲು ಗ್ರಾಮಪಂಚಾಯತಿಗೆ ಹೆಚ್ಚಿನ ಅಧಿಕಾರ ಬೇಕೆಂದು ಸರ್ಕಾರವನ್ನು ಒತ್ತಾಯಿಸುತ್ತಿದ್ದಾರೆ. ಅಷ್ಟೇ ಅಲ್ಲ,

ರಾಜಕೀಯ ಅಧಿಕಾರ ಕೇಂದ್ರಗಳಾದ ಲೋಕಸಭೆ, ರಾಜ್ಯಸಭೆ, ವಿಧಾನಸಭೆ ಹಾಗೂ ವಿಧಾನಪರಿಷತ್ತುಗಳಿಗೆ ಮಹಿಳಾ ಮೀಸಲಾತಿಯನ್ನು ವಿಸ್ತರಿಸಬೇಕೆಂದು ಒತ್ತಾಯಿಸುತ್ತಿದ್ದಾರೆ.

'ಮಹಿಳಾ ಮೀಸಲಾತಿ' ಕುರಿತು ಅನೇಕ ಟೀಕೆಗಳಿವೆ. ಗ್ರಾಮಪಂಚಾಯಿತಿಯಲ್ಲಿ ಆಯ್ಕೆಯಾದ ಮಹಿಳಾ ಪ್ರತಿನಿಧಿಗಳಿಗೆ ಶಿಕ್ಷಣ ಮಟ್ಟ ಕಡಿಮೆ ಅಥವಾ ಶಿಕ್ಷಣವಿಲ್ಲ. ಅವಳ ಹೆಸರಿನಲ್ಲಿ ಗಂಡ ಅಧಿಕಾರ ಚಲಾಯಿಸುತ್ತಾನೆ ಎಂಬ ಟೀಕೆಗಳಿವೆ. ಈ ಟೀಕೆಯನ್ನು ತಾತ್ವಿಕ ನೆಲೆಯಲ್ಲಿ ನೋಡಿದಾಗ. ಶಿಕ್ಷಣ ಕಡಿಮೆಯಿರುವ ಅಥವಾ ಶಿಕ್ಷಣವಿಲ್ಲದ ಅದೇ ಗ್ರಾಮಪಂಚಾಯಿತಿಯ ಪುರುಷ ಸದಸ್ಯರಿಗೆ ಉಂಟಾಗದ ಪ್ರಶ್ನೆ ಮಹಿಳಾ ಸದಸ್ಯರಿಗಾಗುತ್ತದೆ, ಅವರ ಸಾಮರ್ಥ್ಯವನ್ನು ನಿಯಂತ್ರಿಸುವ ಸಾಧನವಾಗಿದೆ.

ಗ್ರಾಮಮಟ್ಟದಲ್ಲಿನ ಮಹಿಳೆಗೆ ಶಿಕ್ಷಣವಿಲ್ಲವೆಂಬ ಟೀಕೆ ಮಾಡಿದರೆ, ಶಿಕ್ಷಣ ಪಡೆದ ಮಹಿಳೆ ಕೇಂದ್ರದ ಅಧಿಕಾರದಲ್ಲಿ ಭಾಗವಹಿಸುವ ಆಸಕ್ತಿ ತೋರಿದರೆ, ಶಿಕ್ಷಿತ ಮಹಿಳೆಯರು ಬಾಬ್‌ಕಟ್ಟಿನ ಮಹಿಳೆಯರು, ತುಟಿಲೇಪನ, ಬಾಟ್ಲಿನೀರು ಕುಡಿಯುವ ಮಹಿಳೆಯರು ಎಂಬ ಟೀಕೆಯನ್ನು ಮಾಡುತ್ತಾರೆ. ಹೀಗೆ ಶಿಕ್ಷಣವಿಲ್ಲದ ಮಹಿಳೆಯರಿಗೆ ಶಿಕ್ಷಣದ ಪ್ರಶ್ನೆಯನ್ನು, ವಿದ್ಯಾವಂತ ಮಹಿಳೆಯರಿಗೆ ಸಂಸ್ಕೃತಿಯ ಮೌಲ್ಯಗಳನ್ನು ಮುಂದಿಡುತ್ತಿರುವುದನ್ನು ನೋಡಿದಾಗ, ಮಹಿಳೆಯರು ಅಧಿಕಾರ ಕೇಂದ್ರದಲ್ಲಿ ಭಾಗವಹಿಸುವುದನ್ನು ನಿರಾಕರಿಸುವ ಹಾಗೂ ವಿರೋಧಿಸುವ ಧೋರಣೆಗಳು ಸ್ಪಷ್ಟವಾಗಿ ಕಾಣುತ್ತವೆ. ಕಾರಣ ಮಹಿಳೆಯರಿಗೆ ಶೇಕಡ ೩೩.೩೩ ಸ್ಥಾನಗಳನ್ನು ಕೇಂದ್ರ ಹಾಗೂ ರಾಜ್ಯ ರಾಜಕೀಯದಲ್ಲಿ ನೀಡಿದರೆ, ಪುರುಷರು ಆ ಸ್ಥಾನಗಳನ್ನು ಕಳೆದುಕೊಳ್ಳುತ್ತಾರೆಂಬ ಭಯಕ್ಕೆ ಒಳಗಾಗಿದ್ದಾರೆ.

ಒಟ್ಟಿನಲ್ಲಿ ಗ್ರಾಮಪಂಚಾಯತಿ ಮಹಿಳೆಯರಿಗೆ ದೊರೆತ ಅವಕಾಶ. ಅವರು ಕಡಿಮೆ ಶಿಕ್ಷಣ ಪಡೆದರೂ. ಆಡಳಿತ ಅಧಿಕಾರ ನಿಭಾಯಿಸುವ ಆತ್ಮವಿಶ್ವಾಸ ಮೂಡಿದೆ. ಇದು ಅವರಲ್ಲಿ ಎಂ.ಪಿ. ಹಾಗೂ ಎಂ.ಎಲ್.ಎ. ಸ್ಥಾನಕ್ಕೆ ಸ್ಪರ್ಧಿಸುವ ಮನೋಭಾವ ಮೂಡಿಸಿದೆ. ಹಾಗಾಗಿ ಈ 'ಮಹಿಳಾ ಮೀಸಲಾತಿ' ಲೋಕಸಭೆ ಮತ್ತು ವಿಧಾನಸಭೆಗಳಿಗೆ ವಿಸ್ತರಿಸುವುದರಿಂದ, ಮಹಿಳೆಯರಲ್ಲಿ ಆತ್ಮವಿಶ್ವಾಸ ಹೆಚ್ಚಿಸುತ್ತದಷ್ಟೆ ಅಲ್ಲ ದೇಶದ ಅಭಿವೃದ್ಧಿಯೂ ಆಗುತ್ತದೆದೆಂಬುದಂತೂ ಖಚಿತ.

# ಸಲಹೆಗಳು

- ಆರ್ಥಿಕವಾಗಿ ದುರ್ಬಲರಾದ ಮಹಿಳೆಯರಿಗೆ ಮಹಿಳಾ ಮೀಸಲಾತಿಯ ಮೂಲಕ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನೇರವಾಗಿ ಭಾಗವಹಿಸುವ ಅವಕಾಶ ಕಾನೂನು ಮುಖಾಂತರ ದೊರಕಬೇಕು.
- ಪ್ರತಿಯೊಂದು ರಾಜಕೀಯ ಪಕ್ಷಗಳು ಚುನಾವಣಾ ಪ್ರಣಾಳಿಕೆ ಸಮಿತಿಯಲ್ಲಿ ಭಾಗವಹಿಸಲು ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರಿಗೆ ಅವಕಾಶ ಮಾಡಿಕೊಡಬೇಕು.
- ನಿರ್ಣಯ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ೧/೩ ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕು.
- ಮಹಿಳಾ ಮೀಸಲು ಕ್ಷೇತ್ರಗಳನ್ನು ಹೆಚ್ಚಿಸಬೇಕು.
- ರಾಜ್ಯ ವಿಧಾನಸಭೆ ಹಾಗು ಲೋಕಸಭೆಗಳು ಶಾಸನ ರಚಿಸುವ ಸದನಗಳಾದ್ದರಿಂದ ಹಾಗೂ ಇಡೀ ದೇಶಕ್ಕೆ, ರಾಜ್ಯಕ್ಕೆ ಕಾರ್ಯನೀತಿ ರೂಪಿಸುವ ಸದನಗಳಾದ್ದರಿಂದ ಅಲ್ಲಿ ಮಹಿಳೆಯರ ಸಂಖ್ಯೆ ಹಾಗೂ ಸ್ಥಾನಗಳು ಪುರುಷರಿಗೆ ಸಮನಾಗಿರಬೇಕು.
- ಮಹಿಳೆಯರ, ಶೋಷಿತರ ಹಾಗೂ ಸಮಾಜದ ಅಂಚಿನಲ್ಲಿರುವವರ ಶೋಷಣೆಗೆ ಕಾರಣಗಳನ್ನು ಹುಡುಕಿ ಅವುಗಳ ಪರಿಹಾರಕ್ಕಾಗಿ ಆಡಳಿತ ರಂಗ ಕಾರ್ಯಮಾಡಬೇಕು ಎಂದು ಹೇಳಬಹುದು.

# ಗ್ರಾಮ ಪಂಚಾಯತಿಗಳ ಕೋಷ್ಟಕ – ೧

ಜಿಲ್ಲೆ: ಕೊಪ್ಪಳ

ತಾಲ್ಲೂಕು: ಕುಷ್ಟಗಿ

| ಕ್ರ. ಸಂ. | ಗ್ರಾಮಪಂಚಾಯತಿ ಹೆಸರು | ಒಟ್ಟು ಸ್ಥಾನಗಳ ಸಂಖ್ಯೆ | ವರ್ಗವಾರು ಕಾಯ್ದಿರಿಸಿದ ಸ್ಥಾನಗಳು | | | | | ಒಟ್ಟು ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಕಾಯ್ದಿರಿಸಿದ ಸ್ಥಾನಗಳು | | | | |
|---|---|---|---|---|---|---|---|---|---|---|---|---|
| | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ–ಅ | ಹಿಂದುಳಿದ ವರ್ಗ–ಬ | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ–ಅ | ಹಿಂದುಳಿದ ವರ್ಗ–ಬ | ಸಾಮಾನ್ಯ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| ೧. | ನಿಲೋಗಲ್ಲ | ೧೮ | ೧ | ೫ | ೫ | ೧ | ೬ | ೧ | ೨ | ೨ | ೦ | ೨ |
| ೨. | ತಗ್ಗಲಡೋಣಿ | ೧೬ | ೧ | ೨ | ೪ | ೧ | ೮ | ೧ | ೧ | ೨ | ೦ | ೩ |
| ೩. | ಹನಮನಾಳ | ೨೨ | ೨ | ೬ | ೬ | ೧ | ೭ | ೧ | ೨ | ೨ | ೧ | ೩ |
| ೪. | ಮಾಲಗಿತ್ತಿ | ೧೭ | ೧ | ೨ | ೫ | ೧ | ೮ | ೧ | ೧ | ೨ | ೦ | ೩ |
| ೫. | ಜಾಗಿ ಈರಗುಡದೂಶ | ೧೯ | ೨ | ೫ | ೫ | ೧ | ೬ | ೧ | ೨ | ೨ | ೦ | ೨ |
| ೬. | ಯರಗೇರಿ | ೧೯ | ೩ | ೨ | ೫ | ೧ | ೮ | ೧ | ೧ | ೨ | ೦ | ೩ |
| ೭. | ಹನಮಸಾಗರ | ೩೩ | ೫ | ೧ | ೯ | ೨ | ೧೬ | ೨ | ೧ | ೨ | ೧ | ೬ |
| ೮. | ಕಬ್ಬರಗಿ | ೧೭ | ೧ | ೩ | ೫ | ೧ | ೭ | ೧ | ೧ | ೨ | ೦ | ೩ |
| ೯. | ಕಾಟಾಪುರ | ೧೮ | ೧ | ೧ | ೫ | ೧ | ೧೦ | ೧ | ೧ | ೨ | ೦ | ೪ |
| ೧೦. | ಹೊಲಗೇರಿ | ೧೫ | ೩ | ೧ | ೪ | ೧ | ೬ | ೧ | ೧ | ೨ | ೦ | ೨ |
| ೧೧. | ಅಡವಿಭಾವಿ | ೧೮ | ೨ | ೩ | ೫ | ೧ | ೭ | ೧ | ೧ | ೨ | ೦ | ೩ |
| ೧೨. | ಚಳಗೇರಾ | ೧೯ | ೨ | ೧ | ೫ | ೧ | ೧೦ | ೧ | ೧ | ೨ | ೦ | ೪ |
| ೧೩. | ಬೆನಕನಾಳ | ೧೯ | ೨ | ೨ | ೫ | ೧ | ೯ | ೧ | ೧ | ೨ | ೦ | ೩ |
| ೧೪. | ಹಿರೇಗೊಣ್ಣಗರ | ೧೭ | ೧ | ೪ | ೫ | ೧ | ೬ | ೧ | ೨ | ೨ | ೦ | ೨ |
| ೧೫. | ಹಿರೇಬನ್ನಿಗೋಳ | ೧೫ | ೧ | ೪ | ೪ | ೧ | ೫ | ೧ | ೨ | ೨ | ೦ | ೨ |
| ೧೬. | ಕೊರಡಕೇರಾ | ೧೮ | ೨ | ೪ | ೫ | ೧ | ೬ | ೧ | ೨ | ೨ | ೦ | ೨ |
| ೧೭. | ತಳುವಗೇರಾ | ೧೭ | ೨ | ೧ | ೫ | ೧ | ೮ | ೧ | ೧ | ೨ | ೦ | ೩ |
| ೧೮. | ಬಿಜಕಲ್ಲ | ೨೩ | ೬ | ೧ | ೬ | ೧ | ೮ | ೨ | ೧ | ೨ | ೦ | ೩ |
| ೧೯. | ದೋಣಿಹಾಳ | ೧೯ | ೨ | ೧ | ೫ | ೧ | ೧೦ | ೧ | ೧ | ೨ | ೧ | ೩ |
| ೨೦. | ಕ್ಯಾಗಿಗುಪ್ಪ | ೧೯ | ೫ | ೨ | ೫ | ೧ | ೬ | ೨ | ೧ | ೨ | ೦ | ೪ |
| ೨೧. | ಮುದೇನೂರ | ೨೩ | ೩ | ೧ | ೬ | ೨ | ೧೧ | ೧ | ೧ | ೨ | ೧ | ೪ |

| ಕ್ರ. ಸಂ. | ಗ್ರಾಮಪಂಚಾಯತಿ ಹೆಸರು | ಒಟ್ಟು ಸ್ಥಾನಗಳ ಸಂಖ್ಯೆ | ವರ್ಗವಾರು ಕಾಯ್ದಿರಿಸಿದ ಸ್ಥಾನಗಳು | | | | | ಒಟ್ಟು ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಕಾಯ್ದಿರಿಸಿದ ಸ್ಥಾನಗಳು | | | | |
|---|---|---|---|---|---|---|---|---|---|---|---|---|
| | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ-ಅ | ಹಿಂದುಳಿದ ವರ್ಗ-ಬ | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ-ಅ | ಹಿಂದುಳಿದ ವರ್ಗ-ಬ | ಸಾಮಾನ್ಯ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| ೧೧. | ಕಂದಕೂರ | ೧೧ | ೨ | ೩ | ೫ | ೮ | ೭ | ೮ | ೧ | ೧ | ೮ | ೨ |
| ೧೨. | ಹಿರೇಮನ್ನಾಪೂರ | ೧ | ೩ | ೩ | ೫ | ೮ | ೬ | ೧ | ೧ | ೧ | ೮ | ೨ |
| ೧೩. | ಜುಮಲಾಪೂರ | ೧೦ | ೨ | ೨ | ೫ | ೮ | ೬ | ೮ | ೮ | ೧ | ೮ | ೨ |
| ೧೪. | ಕಿಲಾರಹಟ್ಟಿ | ೮೭ | ೨ | ೨ | ೪ | ೮ | ೫ | ೮ | ೮ | ೧ | ೦ | ೧ |
| ೧೫. | ತಾವರಗೇರಾ | ೬ | ೫ | ೧ | ೮೦ | ೧ | ೮೬ | ೧ | ೮ | ೨ | ೮ | ೫ |
| ೧೬. | ಮಣೇದಾಳ | ೧೦ | ೨ | ೪ | ೫ | ೮ | ೪ | ೮ | ೧ | ೧ | ೮ | ೧ |
| ೧೭. | ಸಂಗನಾಳ | ೮೯ | ೧ | ೫ | ೪ | ೮ | ೪ | ೮ | ೧ | ೧ | ೦ | ೧ |
| | ಒಟ್ಟು: | ೪೪೯ | ೬೧ | ೬೯ | ೮೪೨ | ೨೧ | ೧೧೨ | ೨೨ | ೨೭ | ೪೭ | ೯ | ೭೩ |

# ಗ್ರಾಮ ಪಂಚಾಯತಿಗಳ ಕೋಷ್ಟಕ – ೨

ಜಿಲ್ಲೆ: ಕೊಪ್ಪಳ

ತಾಲ್ಲೂಕು: ಯಲಬುರ್ಗಾ

| ಕ್ರ. ಸಂ. | ಗ್ರಾಮಪಂಚಾಯತಿ ಹೆಸರು | ಒಟ್ಟು ಸ್ಥಾನಗಳ ಸಂಖ್ಯೆ | ವರ್ಗವಾರು ಕಾಯ್ದಿರಿಸಿದ ಸ್ಥಾನಗಳು | | | | | ಒಟ್ಟು ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಕಾಯ್ದಿರಿಸಿದ ಸ್ಥಾನಗಳು | | | | |
|---|---|---|---|---|---|---|---|---|---|---|---|---|
| | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ–ಅ | ಹಿಂದುಳಿದ ವರ್ಗ–ಬ | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ–ಅ | ಹಿಂದುಳಿದ ವರ್ಗ–ಬ | ಸಾಮಾನ್ಯ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| ೧. | ಹೊಸಕೇರಾ | ೧೬ | ೨ | ೩ | ೪ | ೧ | ೬ | ೧ | ೧ | ೨ | – | ೨ |
| ೨. | ಹಣವಾಳ | ೧೮ | ೩ | ೨ | ೫ | ೧ | ೭ | ೧ | ೧ | ೨ | – | ೩ |
| ೩. | ಗುಂಡೂರ | ೨೪ | ೬ | ೩ | ೬ | ೨ | ೭ | ೨ | ೧ | ೨ | ೧ | ೩ |
| ೪. | ಮರಲಾನಹಳ್ಳ | ೧೮ | ೪ | ೫ | ೫ | ೧ | ೩ | ೨ | ೨ | ೨ | – | ೧ |
| ೫. | ತುಳ್ಳಹಾಳ | ೧೮ | ೩ | ೬ | ೫ | ೧ | ೩ | ೧ | ೨ | ೨ | – | ೧ |
| ೬. | ಕಾರಟಗಿ | ೬೨ | ೬ | ೭ | ೧೭ | ೪ | ೨೮ | ೨ | ೩ | ೬ | ೧ | ೧೦ |
| ೭. | ಚಳ್ಳೂರ | ೨೧ | ೪ | ೫ | ೬ | ೧ | ೫ | ೨ | ೨ | ೨ | ೧ | ೨ |
| ೮. | ಚಿಕ್ಕಡಂಕನ ಕಲ್ಲ | ೨೩ | ೭ | ೫ | ೬ | ೨ | ೩ | ೩ | ೨ | ೨ | ೧ | ೧ |
| ೯. | ಕನಕಗಿರಿ | ೩೭ | ೫ | ೨ | ೧೦ | ೨ | ೧೮ | ೨ | ೧ | ೩ | ೧ | ೬ |
| ೧೦. | ಗೌರಿಪೂರ | ೧೬ | ೫ | ೪ | ೪ | ೧ | ೨ | ೨ | ೨ | ೨ | – | ೧ |
| ೧೧. | ಹುಲಿಹೈದರ | ೨೬ | ೩ | ೯ | ೭ | ೨ | ೫ | ೧ | ೩ | ೨ | ೧ | ೨ |
| ೧೨. | ಕರಡೋಣಾ | ೧೬ | ೧ | ೮ | ೪ | ೧ | ೨ | ೧ | ೩ | ೨ | – | ೧ |
| ೧೩. | ನವಲಿ | ೨೨ | ೫ | ೩ | ೬ | ೧ | ೭ | ೨ | ೧ | ೨ | ೧ | ೩ |
| ೧೪. | ಬೇವಿನಾಳ | ೨೮ | ೪ | ೩ | ೭ | ೨ | ೧೨ | ೨ | ೧ | ೨ | ೧ | ೪ |
| ೧೫. | ಮುಸಲಾಪುರ | ೧೬ | ೫ | ೨ | ೪ | ೧ | ೪ | ೨ | ೧ | ೨ | – | ೨ |
| ೧೬. | ಮುಸ್ಟೂರ | ೧೯ | ೫ | ೧ | ೫ | ೧ | ೭ | ೨ | ೧ | ೨ | – | ೩ |
| ೧೭. | ಸಿದ್ದಾಪೂರ | ೨೯ | ೬ | ೧ | ೮ | ೨ | ೧೨ | ೨ | ೧ | ೩ | ೧ | ೪ |
| ೧೮. | ಬೀರೂರ | ೧೬ | ೪ | ೧ | ೪ | ೧ | ೬ | ೨ | ೧ | ೨ | – | ೨ |
| ೧೯. | ಬೆಣಕಲ್ಲ | ೧೬ | ೨ | ೧ | ೪ | ೧ | ೮ | ೧ | ೧ | ೨ | – | ೩ |
| ೨೦. | ಬಾನಾಪುರ | ೧೮ | ೨ | ೨ | ೫ | ೧ | ೮ | ೧ | ೧ | ೨ | – | ೩ |
| ೨೧. | ತಳಕಲ್ಲ | ೧೭ | ೩ | ೧ | ೫ | ೧ | ೭ | ೧ | ೧ | ೨ | – | ೩ |

| ಕ್ರ. ಸಂ. | ಗ್ರಾಮಪಂಚಾಯತಿ ಹೆಸರು | ಒಟ್ಟು ಸ್ಥಾನಗಳ ಸಂಖ್ಯೆ | ವರ್ಗವಾರು ಕಾಯ್ದಿರಿಸಿದ ಸ್ಥಾನಗಳು | | | | | ಒಟ್ಟು ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಕಾಯ್ದಿರಿಸಿದ ಸ್ಥಾನಗಳು | | | | |
|---|---|---|---|---|---|---|---|---|---|---|---|---|
| | | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ-ಅ | ಹಿಂದುಳಿದ ವರ್ಗ-ಬ | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ-ಅ | ಹಿಂದುಳಿದ ವರ್ಗ-ಬ | ಸಾಮಾನ್ಯ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| ೨೨. | ಇಟಗಿ | ೧೪ | ೩ | ೧ | ೪ | ೧ | ೫ | ೧ | ೧ | ೨ | – | ೨ |
| ೨೩. | ಬನ್ನಿಕೊಪ್ಪ | ೧೩ | ೨ | ೨ | ೩ | ೧ | ೫ | ೧ | ೧ | ೨ | – | ೨ |
| ೨೪. | ಮೆಂಡ್ಲಗೇರ | ೧೭ | ೨ | ೧ | ೫ | ೧ | ೮ | ೧ | ೧ | ೨ | – | ೨ |
| ೨೫. | ಯರೇಹಂಚಿನಾಳ | ೧೭ | ೨ | ೧ | ೫ | ೧ | ೮ | ೧ | ೧ | ೨ | – | ೩ |
| ೨೬. | ಸಂಗನಾಳ | ೮ | ೧ | ೧ | ೨ | ೧ | ೩ | ೧ | ೧ | ೨ | – | ೩ |
| ೨೭. | ಕಲ್ಲೂರು | ೯ | ೧ | ೧ | ೨ | ೧ | ೪ | ೧ | ೧ | ೧ | – | ೧ |
| ೨೮. | ರಾಜೂರು | ೧೬ | ೨ | ೧ | ೪ | ೧ | ೮ | ೧ | ೧ | ೨ | – | ೨ |
| ೨೯. | ಕುಕನೂರು | ೪೦ | ೬ | ೨ | ೧೦ | ೩ | ೧೯ | ೨ | ೧ | ೪ | ೧ | ೭ |

# ಆಕರ ಗ್ರಂಥಸೂಚಿ


| | | | | |
|---|---|---|---|---|
| ೧. | ಇಂದಿರಾ. ಆರ್ | ೨೦೦೨ | ಮಹಿಳೆ ಸಮಾಜ ಮತ್ತು ಸಂಸ್ಕೃತಿ | ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ವಿದ್ಯಾರಣ್ಯ |
| ೨. | ಉಷಾ. ಎಂ | ೨೦೦೫ | ಮಹಿಳೆ ಮತ್ತು ಜಾತಿ | ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ವಿದ್ಯಾರಣ್ಯ |
| ೩. | ಉಷಾ. ಎಂ. | ೨೦೦೪ | ಮಹಿಳೆ ಚಳುವಳಿ ಮತ್ತು ಮಹಿಳಾ ವಿಷಯಗಳು | ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ವಿದ್ಯಾರಣ್ಯ |
| ೪. | ಉಜ್ವಲ ಹಿರೇಮಠ | ೧೯೯೫ | ಮಹಿಳೆಯರ ಪ್ರಗತಿಗೆ ಸಂಪನ್ಮೂಲಗಳ ಕ್ರೃಢೀಕರಣ | ಪ್ರಸಾರಾಂಗ, ಗುಲ್ಬರ್ಗಾ ವಿ.ವಿ. ಗುಲ್ಬರ್ಗಾ |
| ೫. | ಒಡೆಯರ್. ಡಿ. ಹೆಗ್ಗಡೆ | ೨೦೦೨ | ಮಹಿಳಾ ಅಧ್ಯಯನದ ಆರ್ಥಿಕ ನೆಲೆಗಳು ಮತ್ತು ಆಯಾಮಗಳು | ಮಾನವಾಭಿವೃದ್ಧಿ ಅಧ್ಯಯನ ಕೇಂದ್ರ, ಮೈಸೂರು |
| ೬. | ಕಿಶೋರಿನಾಯಕ್.ಕೆ | ೧೯೯೭ | ಸ್ತ್ರೀವಾದಿ ನೆಲೆಗಳು ಮತ್ತು ನಿಲುವುಗಳು | ಪ್ರಸಾರಾಂಗ, ಮಂಗಳೂರು ವಿ.ವಿ. ಮಂಗಳೂರು. |
| ೭. | ಗಾಯತ್ರಿ.ಎನ್ | ೧೯೯೮ | ಮಹಿಳಾ ಚಳುವಳಿಯ ಮಜಲುಗಳು | ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು |
| ೮. | ಗಾಯತ್ರಿ. ಎನ್ | ೧೯೭೬ | ಮಹಿಳೆ ಬಿಡುಗಡೆಯ ಹಾದಿಯಲ್ಲಿ | ನವಕರ್ನಾಟಕ ಪ್ರಕಾಶನ, ಬೆಂಗಳೂರು |
| ೯. | ಗೀತಾ ಕೃಷ್ಣಮೂರ್ತಿ | ೧೯೯೭ | ಮಹಿಳೆ ಕಾನೂನು ಮತ್ತು ರಾಜಕಾರಣ | ಅಕ್ಷರ ಪ್ರಕಾಶನ, ಹೆಗ್ಗೋಡ್. (ಸಾಗರ)ಶಿವಮೊಗ್ಗ |
| ೧೦. | ಚಂದ್ರಶೇಖರ. ಟಿ.ಆರ್ | ೨೦೦೦ | ವಿಕೇಂದ್ರಿಕರಣ : ತತ್ವ ಆಚರಣೆ | ಕನ್ನಡ ವಿ.ವಿ. ಹಂಪಿ. ವಿದ್ಯಾರಣ್ಯ |
| ೧೧. | ಜೋತ್ಸಾ ್ನಕಾಮತ್ | ೨೦೦೧ | ಮಹಿಳೆ ಅಂದು-ಇಂದು | ಶ್ರೀಪ್ರೇಮ ಸಾಯಿ ಪ್ರಕಾಶನ, ಬೆಂಗಳೂರು |
| ೧೨. | ನಾಗೇಶ. ಹೆಚ್.ವಿ | ೧೯೯೩ | ಮಹಿಳಾ ಅಧ್ಯಯನ | ಹೆಚ್.ವಿ. ನಾಗೇಶ್ ಸನ್ಮಾನ ಸಮಿತಿ, ಧಾರವಾಡ |
| ೧೩. | ನೀಲಮ್ಮ ಕತ್ನಳ್ಳಿ | ೧೯೯೧ | ಮಹಿಳೆ ಹಲವು ಮುಖಗಳು | ಶ್ರೀ ರೇಣುಕಾ ಪ್ರಕಾಶನ |
| ೧೪. | ನೇಮಿಚಂದ್ರ | ೨೦೦೧ | ಮಹಿಳಾ ಅಧ್ಯಯನ | ಅಂಕಿತ ಪ್ರಕಾಶನ, ಬೆಂಗಳೂರು |
| ೧೫. | ಪ್ರೀತಿ ಶುಭಚಂದ್ರ | ೨೦೦೨ | ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ವಿಷಯಗಳು | ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ. ವಿದ್ಯಾರಣ್ಯ. |

| | | | |
|---|---|---|---|
| ೧೩. ಪಾರ್ವತಮ್ಮ. ಸಿ | ೨೦೦೧ | ಮೀಸಲಾತಿ ಒಂದು ಗಗನ ಕುಸುಮ | ಶಿಕ್ಷಣ ಮುಖಿ ಪ್ರಕಾಶನ, ಉಣಸೂರು |
| ೧೭. ಬಡಗ ಸೀಮೆ ಮಹೇಶ್. ಎಂ | ೨೦೦೪ | ಮಹಿಳೆ ಸಶಕ್ತೀಕರಣ ಕೆಲವು ಒಳನೋಟಗಳು | ತಾರಾ ಪಬ್ಲಿಕೇಷನ್ಸ್ ಆ್ಯಂಡ್ ಪಬ್ಲಿಕಿಂಗ್ ಹೌಸ್, ಮೈಸೂರು |
| ೧೮. ಮರುಳಸಿದ್ದಯ್ಯ. ಹೆಚ್.ಎಂ. | ೧೯೯೩ | ಗ್ರಾಮೋನ್ನತಿ | ಸ್ವತ್ತಿ ಪ್ರಕಾಶನ, ಬೆಂಗಳೂರು |
| ೧೯. ಮೀನಾಕ್ಷಿ. ಡಿ. | ೨೦೦೨ | ಗ್ರಾಮಪಂಚಾಯತಿಯಲ್ಲಿ ಮಹಿಳೆಯ ಪಾತ್ರ (ಪಿ.ಎಚ್.ಡಿ. ಪ್ರಬಂಧ) | ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿ.ವಿ. ಹಂಪಿ, ವಿದ್ಯಾರಣ್ಯ |
| ೨೦. ವೆಂಕೋಬರಾವ್. ಡಿ. | ೨೦೦೦ | ನ್ಯಾಯಕ್ಕಾಗಿ ಮಹಿಳೆಯ ಹೋರಾಟ | ದಿವ್ಯಚಂದ್ರ ಪ್ರಕಾಶನ, ಬೆಂಗಳೂರು |
| ೨೧. ವೆಂಕಟೇಶ್. ಎ | ೨೦೦೬ | ನಗರ ಮತ್ತು ಗ್ರಾಮೀಣ ರಾಜಕೀಯದಲ್ಲಿ ಮಹಿಳೆ (ಪಿ.ಎಚ್.ಡಿ. ಪ್ರಬಂಧ) | ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ. ವಿ.ವಿ. ಹಂಪಿ. ವಿದ್ಯಾರಣ್ಯ. |
| ೨೨. ವಿಠಲರಾವ್ ಗಾಯಕ್ವಾಡ್ | ೨೦೦೧ | ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು | ಪ್ರಸಾರಾಂಗ, ಕ.ವಿ.ವಿ. ಹಂಪಿ ವಿದ್ಯಾರಣ್ಯ |
| ೨೩. ಸಹೇಲಿ | ೧೯೯೯ | ಮೀಸಲಾತಿ ಮಹಿಳಾ ಚಳುವಳಿಯ ಅಲ್ಪಾವಧಿ, ದೀರ್ಘಾವಧಿ ತಂತ್ರಗಳು | ಮಹಿಳಾ ಸಂಪನ್ಮೂಲ ಕೇಂದ್ರ, ನವದೆಹಲಿ |
| ೨೪. ಸುಮಿತ್ರಾಬಾಯಿ.ಬಿ.ಎನ್ | ೧೯೯೫ | ಸ್ತ್ರೀವಾದಿ ಪ್ರವೇಶಿಕೆ | ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು |
| ೨೫. ಶ್ರೀಮತಿ. ಹೆಚ್.ಎಸ್ | ೨೦೦೧ | ರಾಜಕೀಯ ಕ್ಷೇತ್ರ ಮತ್ತು ಮಹಿಳೆ | ಮಹಿಳಾ ಅಧ್ಯಯನ ಸಂಚಿಕೆ ಪ್ರಸಾರಾಂಗ, ಕ.ವಿ.ವಿ. ಹಂಪಿ. |
| ೨೬. ಶ್ರೀಮತಿ ಹೆಚ್.ಎಸ್. | ೨೦೦೧ | ಆಧುನಿಕ ಭಾರತದಲ್ಲಿ ಮಹಿಳೆ | ಮಹಿಳಾ ಅಧ್ಯಯನ ಸಂಚಿಕೆ ಪ್ರಸಾರಾಂಗ, ಕ.ವಿ.ವಿ. ಹಂಪಿ. |
| ೨೭. ಶ್ರೀಲತ ಬಾಟ್ಲೆವಾಲ, ಬಿ.ಕೆ.ಅನಿತಾ | ೧೯೯೧ | ಅಂತಸ್ತಿನ ಅನ್ವೇಷಣೆ | ಉಚ್ಚ ಅಧ್ಯಯನಗಳ ರಾಷ್ಟ್ರೀಯ ಸಂಸ್ಥೆ. |
| ೨೮. ಶೆಲ್ಲಿಕೇರಿ. ಹೆಚ್.ಪಿ. | ೨೦೦೩ | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಇಲಾಖೆಯ ಕಾರ್ಯಕ್ರಮಗಳು | ಮಹಾಂತೇಶ್ ಬುಕ್ ಡಿಪೋ, ಬಾಗಲಕೋಟೆ. |
| ೨೯. ಹೇಮಲತ ಮಹಿಷಿ | ೨೦೦೪ | ಮಹಿಳೆ ಮತ್ತು ಕಾನೂನು | ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು |
| ೩೦. ಹೇಮಲತ ಹೆಚ್.ಎಂ. | ೨೦೦೪ | ಮಹಿಳೆ ಅಧ್ಯಯನ ಭಾಗ-೧ | ಡಿ.ವಿ.ಕೆ. ಮೂರ್ತಿ ಪ್ರಕಾಶನ, ಬೆಂಗಳೂರು |

# ವಕ್ತೃ ವಿವರ

೧. ಹೆಸರು : ವಿಜಯಲಕ್ಷ್ಮಿ ವೀರೇಶಹಾಸಗಲ್ಲ.
ವಯಸ್ಸು : ೩೫ ವರ್ಷ
ಜಾತಿ : ಪಂಚಮಸಾಲಿ (ಲಿಂಗಾಯತ)
ಶಿಕ್ಷಣ : ೭ನೇ ತರಗತಿ
ವಾಸಸ್ಥಳ : ಹಿರೇಮನ್ನಾಪುರ
ಗ್ರಾ.ಪಂ : ಸದಸ್ಯರು

೨. ಹೆಸರು : ದೇವಮ್ಮ ರಾಮಣ್ಣ ಗೋಪಾಳಿ
ವಯಸ್ಸು : ೫೬ ವರ್ಷ
ಜಾತಿ : ತಳವಾರ (ಪರಿಶಿಷ್ಟ ಪಂಗಡ)
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ಕುಂದಾಕೂರು (ಕುಷ್ಟಗಿ)
ಗ್ರಾ.ಪಂ : ಅಧ್ಯಕ್ಷರು

೩. ಹೆಸರು : ಮಾಬೂಬಿ
ವಯಸ್ಸು : ೪೮ ವರ್ಷ
ಜಾತಿ : ಪಿಂಜಾರ (ಪರಿಶಿಷ್ಟ ಜಾತಿ)
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ಕುಂದಾಕೂರು (ಕುಷ್ಟಗಿ)
ಗ್ರಾ.ಪಂ : ಸದಸ್ಯರು

೪. ಹೆಸರು : ದ್ಯಾಮವ್ವ ಬಸವರಾಜ
ವಯಸ್ಸು : ೫೦ ವರ್ಷ
ಜಾತಿ : ಪರಿಶಿಷ್ಟ ಪಂಗಡ
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ನಾಗರಾಳ
ಗ್ರಾ.ಪಂ : ಸದಸ್ಯರು

೫. ಹೆಸರು : ಹುಲಿಗೆಮ್ಮ ಮನ್ನಾಪುರ
ವಯಸ್ಸು : ೬೦ ವರ್ಷ
ಜಾತಿ : ವಾಲ್ಮೀಕಿ (ಪರಿಶಿಷ್ಟ ಪಂಗಡ)
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ಹಿರೇಅರಳಿಹಳ್ಳಿ (ಯಲಬುರ್ಗಾ)
ಗ್ರಾ.ಪಂ : ಸದಸ್ಯರು

೬. ಹೆಸರು : ದೇವಮ್ಮ ಕಜ್ಜಿ
ವಯಸ್ಸು : ೫೭ ವರ್ಷ
ಜಾತಿ : ಪರಿಶಿಷ್ಟ ಪಂಗಡ
ಶಿಕ್ಷಣ : ೫ನೇ ತರಗತಿ
ವಾಸಸ್ಥಳ : ಹಿರೇ ಮನ್ನಪುರ
ಗ್ರಾ.ಪಂ : ಉಪಾಧ್ಯಕ್ಷರು

೭. ಹೆಸರು : ಹನುಮಮ್ಮ
ವಯಸ್ಸು : ೪೫ ವರ್ಷ
ಜಾತಿ : ಪರಿಶಿಷ್ಟಜಾತಿ
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ಲಿಂಗನಬಂಡ್ರಿ
ಗ್ರಾ.ಪಂ : ಸದಸ್ಯರು

೮. ಹೆಸರು : ದೇವಮ್ಮ
ವಯಸ್ಸು : ೪೦ ವರ್ಷ
ಜಾತಿ : ಸಾಮಾನ್ಯ
ಶಿಕ್ಷಣ : ೩ನೇ ತರಗತಿ
ವಾಸಸ್ಥಳ : ಲಿಂಗನಬಂಡ್ರಿ
ಗ್ರಾ.ಪಂ : ಸದಸ್ಯರು

೯. ಹೆಸರು : ನಿಂಗಮ್ಮ ಹೂಗಾರ
ವಯಸ್ಸು : ೪೩ ವರ್ಷ
ಜಾತಿ : ಹೂಗಾರ
ಶಿಕ್ಷಣ : ೨ನೇ ತರಗತಿ
ವಾಸಸ್ಥಳ : ಕಲಕನಬಂಡಿ (ಹಿರೇಅರಳೀಹಳ್ಳಿ, ಯಲಬುರ್ಗಾ)
ಗ್ರಾ.ಪ : ಶಿದನ್ನೂರು

೧೦. ಹೆಸರು : ಶಂಕರಮ್ಮ
ವಯಸ್ಸು : ೩೭ ವರ್ಷ
ಜಾತಿ : ಲಿಂಗಾಯತ
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ಹೊಸೂರು
ಗ್ರಾ.ಪ : ಶಿದನ್ನೂರು.

೧೧. ಹೆಸರು : ದುರುಗಮ್ಮ
ವಯಸ್ಸು : ೪೩ ವರ್ಷ
ಜಾತಿ : ಪರಿಶಿಷ್ಟಜಾತಿ
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ಮಾಟರಂಗಿ
ಗ್ರಾ.ಪ : ಶಿದನ್ನೂರು

೧೨. ಹೆಸರು : ಫಕೀರಮ್ಮ
ವಯಸ್ಸು : ೪೮ ವರ್ಷ
ಜಾತಿ : ಮಾದಿಗ (ಪರಿಶಿಷ್ಟಜಾತಿ)
ಶಿಕ್ಷಣ : ಕಲಿತಿಲ್ಲ
ವಾಸಸ್ಥಳ : ಬಿರಲದಿನ್ನಿ
ಗ್ರಾ.ಪ : ಶಿದನ್ನೂರು